# ಚಂದಾದಾರರಾಗ ಬಯಸುವಿರಾ?

'ಇತಿಹಾಸ ದರ್ಪಣ'ದ ಚಂದಾದಾರರಾಗ ಬಯಸುವವರು ನಿಮ್ಮ ಆಯ್ಕೆಯ ಚಂದಾ ಹಣವನ್ನು ಡಿ.ಡಿ /ಚೆಕ್/ ಎಂ.ಓ ಮೂಲಕ ಕೆಳಕಂಡ ವಿಳಾಸಕ್ಕೆ ಕಳುಹಿಸಿ ಕೊಡಬಹುದು.

– ಡಿ.ಡಿ ಕಳುಹಿಸಿಕೊಡುವವರು "EDITOR, ITIHASA DARPANA" ಹೆಸರಿಗೆ ಬೆಂಗಳೂರಿನಲ್ಲಿ ಸಂದಾಯವಾಗುವಂತೆ ಡಿ.ಡಿ.ಯನ್ನು ತೆಗೆಸಿ, ಅದನ್ನು ನಿಮ್ಮ ವಿಳಾಸವುಳ್ಳ ಪತ್ರದೊಂದಿಗೆ ನಮಗೆ ಕಳುಹಿಸಿ ಕೊಡಿ.

– ಚೆಕ್ ಕಳುಹಿಸಿಕೊಡುವವರು ಚೆಕ್ಕನ್ನು "EDITOR, ITIHASA DARPANA" ಹೆಸರಿಗೆ ಬರೆದು, ಚೆಕ್ಕಿನ ಮೇಲ್ಭಾಗದ ಎಡಮೂಲೆಯಲ್ಲಿ "ಅಕೌಂಟ್ ಪೇ" ಎಂದು ನಮೂದಿಸಿ, ನಿಮ್ಮ ವಿಳಾಸದ ಪತ್ರದೊಂದಿಗೆ ಕಳುಹಿಸಿ. **ಬೆಂಗಳೂರಿನ ಹೊರಗಡೆಯ ಚೆಕ್ಕುಗಳಾಗಿದ್ದಲ್ಲಿ ಬ್ಯಾಂಕಿನ ಸೇವಾಶುಲ್ಕ ೩೦/- ರೂ.ಗಳನ್ನು** ಚಂದಾ ಹಣದ ಮೊತ್ತದಲ್ಲಿ ಸೇರಿಸಿ ಕಳುಹಿಸಿ ಕೊಡಬೇಕು.

– ಎಂ.ಓ ಮಾಡುವವರು ನಿಮ್ಮ ವಿಳಾಸವನ್ನು ಎಂ.ಓ ಅರ್ಜಿಯ ಮೇಲ್ಭಾಗದಲ್ಲಿರುವ ಸಂದೇಶ ಎಂಬ ಸ್ಥಳದಲ್ಲಿ ತಪ್ಪದೇ ನಿಮ್ಮ ವಿಳಾಸ ಬರೆಯಿರಿ. ಇ.ಎಂ.ಓ ಮಾಡಿದ್ದಲ್ಲಿ ಎರಡುದಿನಗಳ ನಂತರ ಕರೆಮಾಡಿ ನಿಮ್ಮ ವಿಳಾಸವನ್ನು ನಮಗೆ ತಿಳಿಸಿ.

– ಇಲ್ಲವಾದಲ್ಲಿ ಬೆಂಗಳೂರಿನ ಚಾಮರಾಜಪೇಟೆಯ ಅಪೆಕ್ಸ್ ಬ್ಯಾಂಕಿನ ಪ್ರಧಾನ ಶಾಖೆಯಲ್ಲಿರುವ "EDITOR, ITIHASA DARPANA" ಹೆಸರಿನ ಚಾಲ್ತಿಖಾತೆ **ಸಂ: 101 882** ಕ್ಕೆ ಚಂದಾಹಣವನ್ನು ನಿಮ್ಮ ಹೆಸರಿನಲ್ಲಿ ಜಮಾ ಮಾಡಿ, ಸ್ವೀಕೃತಿಯ ನಕಲನ್ನು, ನಿಮ್ಮ ವಿಳಾಸದ ಪತ್ರದೊಂದಿಗೆ ನಮಗೆ ಕಳುಹಿಸಿಕೊಡಿ.

## ಚಂದಾ ವಿವರ

| |
|---|
| **ವಾರ್ಷಿಕ ಚಂದಾ** (ಅಂಚೆವೆಚ್ಚ ಸೇರಿ) – ೩೦೦/- ರೂ.ಗಳು. (**ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ –೪೫೦/-ರೂ.ಗಳು**) |
| **ದ್ವೈವಾರ್ಷಿಕ ಚಂದಾ** (ಅಂಚೆವೆಚ್ಚ ಸೇರಿ) – ೫೦೦/- ರೂ.ಗಳು. (**ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೮೦೦/-ರೂ.ಗಳು**). |
| **ಆಜೀವ ಚಂದಾ** – ೪೦೦೦/- ರೂ.ಗಳು. (**ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೬೦೦೦/- ರೂ.ಗಳು**). |

### ಚಂದಾ ಕಳುಹಿಸಿಕೊಡಬೇಕಾದ ವಿಳಾಸ:

**ಸಂಪಾದಕರು, 'ಇತಿಹಾಸ ದರ್ಪಣ',**
# ೩೩ ಎ, ಐ.ಟಿ.ಐ ಕಾಲೇಜು ಹತ್ತಿರ,
ಕೆಂಪೇಗೌಡನಗರ, ವಿಶ್ವನೀಡಂ – ಅಂಚೆ,
ಬೆಂಗಳೂರು-೫೬೦೦೯೧.
ಮೊ- ೭೮೨೯೪೦೪೦೬೩.

**The Editor, 'Itihasa Darpana'**
# 33 A, Near I.T.I College,
Kempegowda Nagara,
Vishwaneedam-Post,
Bengaluru- 560091.
Mob- 7829404063

ISSN 2321 - 3590

# ಇತಿಹಾಸ  ದರ್ಪಣ

(ತ್ರೈಮಾಸಿಕ)

ಚರಿತ್ರಾಸಕ್ತರ ಅಂಕಣ

ಇತಿಹಾಸ ದರ್ಪಣ

(ತ್ರೈಮಾಸಿಕ)

*Itihasa Darpana*

**(Quarterly)**

ಪುಸ್ತಕ : ೨೧-೨೨

(ಸಂಯುಕ್ತ ಸಂಚಿಕೆ)

**Book : 21-22**

**(Combined Issue)**

ಏಪ್ರಿಲ್-ಸೆಪ್ಟೆಂಬರ್ : ೨೦೧೪

**April-September : 2014**

| | |
|---|---|
| **ಸಂಪಾದಕರು** | **Editor** |
| ಹಂ.ಗು. ರಾಜೇಶ್ | H.G Rajesh |
| ಸಂ.ದೂ. : ೭೮೨೯೪೦೪೦೬೩ | Mob : 7829404063 |
| **ಉಪ ಸಂಪಾದಕರು** | **Sub Editors** |
| ಸುಂಕಂ ಗೋವರ್ಧನ | Sunkam Govardhan |
| ರಶ್ಮಿ ಎಸ್. | Rashmi S. |
| ಶಿವಕುಮಾರಿ ಎಂ.ಎಸ್. | Shivakumari M.S. |
| **ಅಕ್ಷರ ಜೋಡಣೆ** | **DTP** |
| ಮಹೇಶ್ ಎಂ. | Mahesh M. |
| ಸಂ.ದೂ. : ೯೬೩೨೨೬೫೧೮೧ | Mob : 9632265181 |
| **ಮುಖಪುಟ ವಿನ್ಯಾಸ** | **Cover Design** |
| ಸುರೇಶ್‌ಕುಮಾರ್ ಎಚ್. | Sureshkumar H. |
| ಸಂ.ದೂ. : ೮೯೭೦೬೬೬೮೦೯ | Mob : 8970666809 |
| **ಮುದ್ರಕರು** | **Printed at** |
| ಶ್ರೀ ರಂಗನಾಥ ಪ್ರಿಂಟರ್ಸ್ | Sri Ranganatha Printers |
| ಸಂ.ದೂ. : ೯೮೪೪೧೫೬೧೯೨ | Mob : 9844156192 |


*ಓದುಗರ ಸಲಹೆ-ಸೂಚನೆಗಳನ್ನು 'ಇತಿಹಾಸ ದರ್ಪಣ'ವು ಮುಕ್ತವಾಗಿ ಸ್ವಾಗತಿಸುತ್ತದೆ.*

*E-mail : itihasadarpana@gmail.com*

*ಈ ಪತ್ರಿಕೆಯ ಲೇಖನಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಲೇಖಕರ ಅಭಿಪ್ರಾಯಗಳೇ ವಿನಃ ಪತ್ರಿಕೆಯ ಅಭಿಪ್ರಾಯವಲ್ಲ. -ಸಂ.*

**"THE PUBLICATION OF THIS JOURNAL HAS BEEN FINANCIALLY SUPPORTED BY THE INDIAN COUNCIL OF HISTORICAL RESEARCH. THE RESPONSIBILITY FOR THE FACTS STATED ON OPINIONS EXPRESSED IS ENTIRELY OF THE AUTHOR AND NOT OF THE ICHR."**

# ಪರಿವಿಡಿ. . .

## ನುಡಿಗನ್ನಡಿ

# ಮಹಿಳೆ ಮತ್ತು ಸಮಾಜ

ಇಂದು ಸಮಾಜದಲ್ಲಿ ಹೆಚ್ಚುತ್ತಿರುವ ಮಹಿಳೆ ಮತ್ತು ಮಕ್ಕಳ ಮೇಲಿನ ಲೈಂಗಿಕ ಕಿರುಕುಳ ಮತ್ತು ಅತ್ಯಾಚಾರದಂತಹ ದೌರ್ಜನ್ಯಗಳಿಗೆ ಏನು ಕಾರಣ? ಕೆಲವರು ಹೇಳುತ್ತಾರೆ, ಮಹಿಳೆಯ ಉಡುಗೆ–ತೊಡುಗೆಗಳು ಪುರುಷರನ್ನು ಪ್ರಚೋದಿಸುವಂತಿರುತ್ತವೆ ಆದ್ದರಿಂದ ಹೆಣ್ಣುಮಕ್ಕಳಿಗೆ ವಸ್ತ್ರಸಂಹಿತೆ ಬೇಕು ಅಂತ. ಇನ್ನು ಕೆಲವರು ಹೇಳುತ್ತಾರೆ, ಇವತ್ತು ಇಂಟರ್‌ನೆಂಟ್, ವಾಟ್ಸ್‌ಅಪ್‌ಗಳು ಅಂಗೈಯಲ್ಲೇ ಇರುವುದರಿಂದ ಯುವಜನತೆ ಅವುಗಳನ್ನು ದುರ್ಬಳಕೆ ಮಾಡಿಕೊಳ್ಳುವ ಮೂಲಕ ದುರ್ಮಾರ್ಗಗಳನ್ನು ಹಿಡಿಯಲು ಪ್ರಚೋದನೆಗೊಳ್ಳುತ್ತಿದ್ದಾರೆ ಎಂದು. ಮತ್ತೆ ಕೆಲವರ ಪ್ರಕಾರ, ಜನತೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಈ ರೀತಿಯ ಕುಕೃತ್ಯಗಳನ್ನು ನಡೆಸುತ್ತಾರೆ. ಇದಕ್ಕೆ ಈ ಎಲ್ಲ ಕಾರಣಗಳೂ ಇರಬಹುದು. ಕೆಲವೊಮ್ಮೆ ಹೆಣ್ಣಿನ ದೌರ್ಬಲ್ಯ, ಅಸಹಾಯಕತೆಗಳು ಕೃತ್ಯ ಎಸಗಲು ಕಾರಣವಾಗಿರಬಹುದು. ಈ ಅಂಶಗಳಲ್ಲಿ ಬಹುಪಾಲು ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣ ಮತ್ತು ವಿಜ್ಞಾನ–ತಂತ್ರಜ್ಞಾನದ ಬಳುವಳಿ ಇದೆ ಎಂಬುದನ್ನು ಗಮನಿಸಬೇಕು. ತಾಂತ್ರಿಕತೆ ಬೆಳೆದಂತೆಲ್ಲ ಮನುಷ್ಯ ಸಂಬಂಧಗಳಲ್ಲಿನ ಬೇರುಗಳು ಸಡಿಲಗೊಳ್ಳುತ್ತಿವೆ. ಮಾನವೀಯ ಭಾವನೆಗಳು ಬತ್ತುತ್ತಿವೆ. ಬದುಕು ಯಾಂತ್ರಿಕವಾಗುತ್ತಿದೆ. ಹೆಣ್ಣನ್ನು ಒಂದು ಸರಕಿನಂತೆ ನೋಡುವ ನೋಟಗಳು ತೀವ್ರವಾಗುತ್ತಿದ್ದೆ, ಆದ್ದರಿಂದಲೇ ತಂದೆ ಮಗಳ ಮೇಲೆ, ಮಗ ತಾಯಿಯ ಮೇಲೆ, ಮತ್ಯಾರೋ ವೃದ್ಧೆಯ ಮೇಲೆ, ಶಿಕ್ಷಕ ಎಳೆ ಬಾಲೆಯ ಮೇಲೆ ಅತ್ಯಾಚಾರ ನಡೆಸುತ್ತಿರುವ ಪ್ರಕರಣಗಳು ವರದಿಯಾಗುತ್ತಿವೆ. ಸಮಾಜ ಈಡಿಪಸ್ ಕಾಂಪ್ಲೆಕ್ಸ್‌ನತ್ತ ಹೊರಳುತ್ತಿದೆ. ಇದರರ್ಥ ಸಮಾಜದ ಮನೋಸ್ವಾಸ್ಥ್ಯವೇ ಹದಗೆಡುತ್ತಿದೆ ಎಂದರ್ಥ. ಈ ರೀತಿಯ ಸಾಮಾಜಿಕ ಅಸ್ವಸ್ಥತೆಯ ಸುಧಾರಣೆಗೆ ಮನೋವಿಜ್ಞಾನಿ

ಗಳು, ಸಮಾಜಶಾಸ್ತ್ರಜ್ಞರು, ಚಿಂತಕರು ಮಾರ್ಗೋಪಾಯಗಳನ್ನು ಹುಡುಕಿ ಸರ್ಕಾರದ ಗಮನ ಸೆಳೆಯಬೇಕಿದೆ. ಏಕೆಂದರೆ ಈ ರೀತಿಯ ಸಮಸ್ಯೆಗಳನ್ನು ಕಠಿಣ ಕಾಯ್ದೆ, ಕಾನೂನುಗಳಿಂದ ನಿವಾರಿಸಬಹುದು ಎಂಬುದು ಭ್ರಮೆ. ಒಂದೇ ಕಡೆ ಕೆಲಸ ಮಾಡುವ ಸ್ಥಳಗಳಲ್ಲಿ, ನೆರೆಹೊರೆಯ ಮನೆಯವರಲ್ಲಿ ಮಿಗಿಲಾಗಿ ಒಂದೇ ಮನೆಯ ಒಳಗಡೆಯೇ ಈ ರೀತಿಯ ಪ್ರಕರಣಗಳು ಬೆಳಕಿಗೆ ಬಂದಿರುವುದರಿಂದ ಕಾನೂನು ಎಷ್ಟರಮಟ್ಟಿಗೆ ಕಾರ್ಯನಿರ್ವಹಿಸಬಲ್ಲದು ಎಂಬ ಅನುಮಾನ ಉಂಟಾಗುತ್ತದೆ.

ವಿಜ್ಞಾನ-ತಂತ್ರಜ್ಞಾನದ ಇಂದಿನ ದಿನಮಾನದಲ್ಲಿ ಆಧುನಿಕ ಸಾಧನ-ಸಲಕರಣೆಗಳು ತಲುಪದ ಪ್ರದೇಶವೇ ಇಲ್ಲ. ಈ ವೈಜ್ಞಾನಿಕ ಆವಿಷ್ಕಾರಗಳನ್ನು ಬಳಸಿಕೊಳ್ಳುತ್ತಿರುವುದು ಹೆಚ್ಚು ನೇತ್ಯಾತ್ಮಕ ಸಂಗತಿಗಳಿಗೆ ಎಂಬುದು ವಿಷಾದನೀಯ ಸಂಗತಿ. ಉದಾಹರಣೆಗೆ, ನಾನು ಕೆಲಸ ಮಾಡುತ್ತಿದ್ದ ಸಾರಿಗೆ ಸಂಪರ್ಕವೇ ನೆಟ್ಟಗಿಲ್ಲದ ಕುಗ್ರಾಮವೊಂದರ ಸರ್ಕಾರಿ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿಗಳ ಬಳಿಯಲ್ಲಿದ್ದ ಮೊಬೈಲ್‌ಗಳನ್ನು ಒಮ್ಮೆ ಜಪ್ತಿ ಮಾಡಿದೆ. ಜಪ್ತಿ ಮಾಡಿದ ಆರೇಳು ಮೊಬೈಲ್‌ಗಳಲ್ಲಿ ಎರಡು-ಮೂರು ಮೊಬೈಲ್‌ಗಳಲ್ಲಿದ್ದ ವಿಡಿಯೋ ಕ್ಲಿಪಿಂಗ್ಸ್ ನೋಡಿ ನಾನು ಮತ್ತು ನನ್ನ ಸಹೋದ್ಯೋಗಿಗಳು ದಂಗಾದೆವು. ಅಲ್ಲಿದ್ದುದು ಅಶ್ಲೀಲ(ನೀಲಿ) ಚಿತ್ರಗಳ ತುಣುಕುಗಳು. ಒಂದು ಕುಗ್ರಾಮದಲ್ಲಿನ ವಿದ್ಯಾರ್ಥಿಗಳ ಕಥೆಯೇ ಇದಾದರೆ ನಗರದ ಮಕ್ಕಳ ಕಥೆ ಹೇಗಿರಬಹುದು? ಒಮ್ಮೆ ಯೋಚಿಸಿ. ಮೊಬೈಲ್‌ನಲ್ಲಿ ಇಂಟರ್‌ನೆಟ್, ಫೇಸ್‌ಬುಕ್, ವಾಟ್ಸ್‌ಅಪ್ ಬಳಸುವ ಈ ವಿದ್ಯಾರ್ಥಿ ಮಹೋದಯರಿಗೆ ಭೂಪಟದಲ್ಲಿ ವರ್ಷವೆಲ್ಲಾ ಹೇಳಿಕೊಟ್ಟ ನಾಲ್ಕು ಸ್ಥಳಗಳನ್ನು ಸರಿಯಾಗಿ ಗುರುತಿಸಲು ಬರುವುದಿಲ್ಲ! ನಮ್ಮ ಯುವಜನತೆಯ ಅಪೇಕ್ಷೆಗಳೆಂಥವು, ಅವರ ಮನೋಭಿಲಾಷೆಗಳೇನು? ಎಂಬುದನ್ನು ಗಮನಿಸಿದರೆ ಅವರು ದಾರಿತಪ್ಪಿದ ಮಕ್ಕಳೇ ಸರಿ! ಈ ಹಿನ್ನೆಲೆಯಲ್ಲಿ ಭವಿಷ್ಯದ ಸಮಾಜವನ್ನು ನೆನೆದರೆ ನನ್ನಲ್ಲಿ ನಡುಕ ಹುಟ್ಟುತ್ತದೆ.

ನಮ್ಮ ವಿದ್ಯಾರ್ಥಿಗಳನ್ನು, ಯುವ ಸಮುದಾಯವನ್ನು ಸನ್ಮಾರ್ಗದಲ್ಲಿ ಕರೆದೊಯ್ಯುವ ಶಿಕ್ಷಕರೇ ದಾರಿತಪ್ಪಿದ ಪ್ರಕರಣಗಳುಂಟು. ಹಾಗೆಂದ ಮಾತ್ರಕ್ಕೆ ಶಿಕ್ಷಕರು ಚಿಂತೆಗೀಡಾಗಬೇಕಿಲ್ಲ. ಒಬ್ಬ ಅಯೋಗ್ಯನ ತಪ್ಪು ಇಡೀ ಸಮುದಾಯದ ತಪ್ಪೆಂದು ಭಾವಿಸುವ ಅಗತ್ಯವೂ ಇಲ್ಲ. ನಮ್ಮ ವಿದ್ಯಾರ್ಥಿ ಸಮುದಾಯವನ್ನು, ಯುವಜನಾಂಗವನ್ನು ಮತ್ತು ಸಮಾಜವನ್ನು ಮುನ್ನಡೆಸುವ ಮಾರ್ಗದರ್ಶನ ಮಾಡುವ ಜವಾಬ್ದಾರಿ ನಾಡಿನ ಹಿರಿಯರ, ಚಿಂತಕರ, ಮನಶ್ಶಾಸ್ತ್ರಜ್ಞರ, ಮಿಗಿಲಾಗಿ ಸರ್ಕಾರದ ಮೇಲಿದೆ. ಕಲುಷಿತಗೊಂಡಿರುವುದು ಜನರ ನೋಟ ಮತ್ತು ಮನಸ್ಸುಗಳಾಗಿರುವುದರಿಂದ ಅವರ ಮನೋಗತವನ್ನೇ ಪರಿವರ್ತಿಸಬಹುದಾದ ಮಾರ್ಗೋಪಾಯದ ಕಡೆಗೆ ಚಿಂತಿಸಬೇಕಿದೆ.

ಈ ಹಿನ್ನೆಲೆಯಲ್ಲಿ ನನ್ನ ಪ್ರಕಾರ ಮೂಲಭೂತವಾಗಿ ಆಗಬೇಕಾಗಿರುವುದು ಶಿಕ್ಷಣದ ಪಠ್ಯಗಳಲ್ಲಿ ನೈತಿಕ ಮತ್ತು ಮೌಲ್ಯಯುತ ಶಿಕ್ಷಣವನ್ನು ಕಡ್ಡಾಯವಾಗಿ ಅಳವಡಿಸುವುದು. ಆ ಮೂಲಕ ನಾಳಿನ ಸಜ್ಜನ ಸಮುದಾಯಕ್ಕೆ ಬೀಜಾಂಕುರ ಮಾಡುವುದು. ಪ್ರಾಥಮಿಕ ಹಂತದಿಂದ ಉಂಟಾಗಬೇಕಿರುವ ಈ ಶೈಕ್ಷಣಿಕ ಸುಧಾರಣೆಯಲ್ಲಿ ಮೌಲ್ಯಗಳನ್ನು ಬಿತ್ತುವ

ಕಾರ್ಯ ಯಶಸ್ವಿಯಾದಾಗ ಮಾತ್ರ ಅನೇಕ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆ. ಈ ನಿಟ್ಟಿನಲ್ಲಿ ಸರ್ಕಾರದ ನೀತಿ ನಿರೂಪಕರು, ಚಿಂತಕರು ಚಿಂತನೆ ನಡೆಸಬೇಕಿದೆ. ಕೈ ಮೀರುತ್ತಿರುವ ಈ ಹೊತ್ತಿನಲ್ಲಿಯೂ ಈ ವರ್ಗ ಚಿಂತಕರ ಚಾವಡಿಯಲ್ಲಿ ಪವಡಿಸುತ್ತಾ ಕೂತರೆ ಇಡೀ ವ್ಯವಸ್ಥೆಯೇ ಹಳ್ಳ ಹಿಡಿಯುವುದು ಗ್ಯಾರಂಟಿ.

* * *

ಕಾರಣಾಂತರಗಳಿಂದ ಪುಸ್ತಕ 21 ಮತ್ತು 22 ಸಂಯುಕ್ತ ಸಂಚಿಕೆಯಾಗಿ ಹೊರತರುತ್ತಿದ್ದೇವೆ. ಈ ಸಂಚಿಕೆಯಲ್ಲಿ ಒಂದು ಹೊಸ ಪ್ರಯತ್ನಕ್ಕೆ ಕೈಹಾಕಿದ್ದೇವೆ. ಅದೇನೆಂದರೆ ಆಕರ ವಿಭಾಗ (Source Section) ಎಂಬ ಪ್ರತ್ಯೇಕ ವಿಭಾಗವೊಂದನ್ನು ಪರಿಚಯಿಸುತ್ತಿದ್ದು, ಇಲ್ಲಿ ಅಪ್ರಕಟಿತ ಶಾಸನಗಳು, ನಾಣ್ಯಗಳು, ಅಪರೂಪದ ಅಪೂರ್ವವಾದ ದಾಖಲೆಗಳನ್ನು ಆಸಕ್ತರಿಗೆ, ಸಂಶೋಧಕರಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಪ್ರಕಟಿಸುತ್ತಿದ್ದೇವೆ. ಇಂಗ್ಲಿಷಿನ ದಾಖಲೆಗಳನ್ನು ಯಥಾರೂಪದಲ್ಲಿಯೇ ಪ್ರಕಾಶಿಸುವ ಚಿಂತನೆ ನಡೆಸಿದ್ದು, ಮೊದಲಿಗೆ 19ನೇ ಶತಮಾನದ ಉತ್ತರಾರ್ಧದಲ್ಲಿ ಪ್ರಕಟಗೊಂಡಿದ್ದ ***'OLD DANIEL;' MEMOIR OF A CONVERTED HINDOO...*** ಎಂಬ ಕೃತಿಯನ್ನು ಈ ಬಾರಿ ಮರುಪ್ರಕಟಿಸುತ್ತಿದ್ದೇವೆ. ಇದೊಂದು ಅಪೂರ್ವ ಕೃತಿಯಾಗಿದೆ. ಗುಬ್ಬಿ ಬಳಿಯ ಸಿಂಗೋನಹಳ್ಳಿಯ 'ಚಿಕ್ಕ' ಎಂಬ ಅಗಸ ಸಮುದಾಯಕ್ಕೆ ಸೇರಿದ ವ್ಯಕ್ತಿಯು ಕ್ರೈಸ್ತಮತಕ್ಕೆ ಮತಾಂತರಗೊಳ್ಳುತ್ತಾನೆ. ಅವನ ವೃತ್ತಾಂತವನ್ನೂ, ಅಂದಿನ ಭಾರತೀಯ ಗ್ರಾಮೀಣ ಸಮಾಜವನ್ನೂ ಪರಿಚಯಿಸುವ ಕೃತಿ ಇದಾಗಿದೆ. ಈ ಕೃತಿಯನ್ನು ದೊರಕಿಸಿ ಕೊಟ್ಟವರು ಮನು ವಿ. ದೇವದೇವನ್ ಅವರು. ಮನು ಅವರಿಗೂ, ಈ ಸಂಚಿಕೆಗೆ ವಿಶೇಷವಾಗಿ ದುಡಿದ ಎಸ್.ಕೆ. ಅರುಣಿ, ಪ್ರದೀಪ್‌ಕುಮಾರ್ ಶೆಟ್ಟಿ ಅವರಿಗೂ ಮತ್ತು ಸಂಪಾದಕರ ಬಳಗದ ಎಲ್ಲಾ ಗೆಳೆಯರಿಗೂ ಕೃತಜ್ಞತೆಗಳು.

## ವಿನಂತಿ

ಮುದ್ರಣ ವೆಚ್ಚ ಹಾಗೂ ಕಾಗದ ವೆಚ್ಚ ಒಂದು ಕಡೆ ಏರುತ್ತಿದ್ದರೆ, ಮತ್ತೊಂದು ಕಡೆ ನಮ್ಮ ಪುಸ್ತಕದ ಗಾತ್ರ ಕೂಡ ಹಿಗ್ಗುತ್ತಿದೆ. ಇದರಿಂದ ಅನಿವಾರ್ಯವಾಗಿ 'ಇತಿಹಾಸ ದರ್ಪಣ'ದ ಚಂದಾಹಣವನ್ನು ನವೀಕರಿಸುತ್ತಿದ್ದೇವೆ. ಎಲ್ಲಾ ಸಹೃದಯ ಚಂದಾದಾರರು ಸಹಕರಿಸಬೇಕಾಗಿ ವಿನಂತಿಸುತ್ತೇವೆ. ವಿವರಕ್ಕಾಗಿ ಒಳರಕ್ಷಾಪುಟ ನೋಡಿ.

**–ಸಂಪಾದಕರು**

# 'ಇತಿಹಾಸ ದರ್ಪಣ'ಕ್ಕೆ ಪ್ರಬಂಧವನ್ನು ಕಳುಹಿಸುವ ಮುನ್ನ...

'ಇತಿಹಾಸ ದರ್ಪಣ'ಕ್ಕೆ ಸಂಶೋಧನ ಪ್ರಬಂಧವನ್ನು ಕಳುಹಿಸುವವರು ಈ ಕೆಳಕಂಡ ಕ್ರಮಗಳನ್ನು ಪಾಲಿಸಬೇಕು.

- ಪ್ರಬಂಧವು ಅಪ್ರಕಟಿತವಾಗಿರಬೇಕು ಮತ್ತು ನವ ಶೋಧನೆ, ವಿನೂತನ ವಿಶ್ಲೇಷಣೆ, ಆಲೋಚನೆ ಹಾಗೂ ಸಂಶೋಧನಾ ವಿಧಾನಗಳಿಂದಾಗಿ ಹೊಸತನದಿಂದ ಕೂಡಿದ ಮತ್ತು ಚರಿತ್ರೆಯ ಅಧ್ಯಯನದ ಮೇಲೆ ಹೊಸ ಬೆಳಕು ಚೆಲ್ಲುವ ಪ್ರಬಂಧವಾಗಿರಬೇಕು.
- ಪ್ರಬಂಧವನ್ನು 'ನುಡಿ' ತಂತ್ರಾಂಶದಲ್ಲಿ ಬೆರಳಚ್ಚು ಮಾಡಿ ಇ-ಮೇಲ್ ಮಾಡುವುದು ಹೆಚ್ಚು ಸೂಕ್ತವಾಗಿರುತ್ತದೆ. ಉಲ್ಲೇಖದ ಟಿಪ್ಪಣಿಗಳನ್ನು ಉಲ್ಲೇಖ, ಹೆಚ್ಚಿನ ಮಾಹಿತಿ ಹಾಗೂ ಅಗತ್ಯ ವಿವರಣೆಗಳನ್ನು ಕೊನೆ ಟಿಪ್ಪಣಿಗಳ ರೂಪದಲ್ಲಿ ನೀಡಬೇಕು.
- ಕೊನೆ ಟಿಪ್ಪಣಿಗಳನ್ನು ನೀಡುವಾಗ ಲೇಖಕರ ಹೆಸರು, ಪ್ರಕಟಣಾ ವರ್ಷ, ಕೃತಿಯ ಶೀರ್ಷಿಕೆ (ಇಟ್ಯಾಲಿಕ್‌ನಲ್ಲಿ), ಸ್ಥಳ, ಪ್ರಕಾಶಕರು ಮತ್ತು ಪುಟಗಳ ವಿವರಗಳನ್ನು ಮೊದಲ ಬಾರಿ ನೀಡಬೇಕು. ಪುನರುಕ್ತಗೊಳ್ಳುವಾಗ ಲೇಖಕರ ಹೆಸರು, ವರ್ಷ ಬರೆದು 'ಪೂರ್ವೋಕ್ತ' ಎಂದು ಕೃತಿಯ ಹೆಸರ ಸ್ಥಳದಲ್ಲಿ ನಮೂದಿಸಿ ಪುಟಗಳ ಸಂಖ್ಯೆ ಸೂಚಿಸಬೇಕು. ತತ್ಕೂಡಲೇ ಉಲ್ಲೇಖಿಸುವ ಸಂದರ್ಭದಲ್ಲಿ 'ಇಲ್ಲೇ' ಎಂದು ನಮೂದಿಸಿ ಪುಟಗಳ ಸಂಖ್ಯೆ ಸೂಚಿಸಬೇಕು.
- ಲೇಖನಗಳನ್ನು ಉಲ್ಲೇಖಿಸುವಾಗ– ಲೇಖಕನ ಹೆಸರು, ಪ್ರಕಟಣಾ ವರ್ಷ, ಲೇಖನದ ಶೀರ್ಷಿಕೆ (' ' ಈ ಚಿಹ್ನೆಯಲ್ಲಿ ಕೊಡುವುದು), ಈ ಲೇಖನ ಪ್ರಕಟವಾದ ನಿಯತಕಾಲಿಕೆ ಹೆಸರು (ಇಟ್ಯಾಲಿಕ್‌ನಲ್ಲಿ), ಸಂಚಿಕೆ, ಸಂಪುಟ, ವರ್ಷ, ಪ್ರಕಟವಾಗುತ್ತಿರುವ ಸ್ಥಳ ಮತ್ತು ಪುಟಗಳ ವಿವರ ಸೂಚಿಸುವುದು.
- ಸಂಪಾದಿತ ಕೃತಿಯಲ್ಲಿನ ಲೇಖನವನ್ನು ಉಲ್ಲೇಖಿಸುವಾಗ– ಲೇಖಕನ ಹೆಸರು, ಪ್ರಕಟಣಾ ವರ್ಷ, ಲೇಖನದ ಶೀರ್ಷಿಕೆ (' '), ಸಂಪಾದಕರ ಹೆಸರು, ಕೃತಿಯ ಶೀರ್ಷಿಕೆ (ಇಟ್ಯಾಲಿಕ್‌ನಲ್ಲಿ), ಸ್ಥಳ, ಪ್ರಕಾಶಕರು, ಪುಟಗಳ ವಿವರ ಸೂಚಿಸುವುದು.
- ಪ್ರಬಂಧಕ್ಕೆ ಪೂರಕವಾದ ಚಿತ್ರಗಳನ್ನು ಕಳುಹಿಸಿಕೊಡಬಹುದು. ಅವುಗಳಿಗೆ ಕಡ್ಡಾಯವಾಗಿ ಚಿತ್ರ ಶೀರ್ಷಿಕೆಗಳನ್ನು ನೀಡಿರಬೇಕು.
- ಪ್ರಕಟಣೆಗೆ ಬರುವ ಪ್ರಬಂಧಗಳನ್ನು ಪೂರ್ವಾವಲೋಕನಕ್ಕಾಗಿ ತಜ್ಞರಿಗೆ ಕಳುಹಿಸಿ ಕೊಡಲಾಗುವುದು. ಆಯ್ಕೆಯಾದ ಪ್ರಬಂಧಗಳನ್ನು ಪ್ರಕಟಣಾ ಪೂರ್ವದಲ್ಲಿಯೇ ಲೇಖಕರಿಗೆ ತಿಳಿಸಲಾಗುವುದು.
- ಪ್ರಕಟವಾದ ಪ್ರಬಂಧಗಳಿಗೆ ಯಾವುದೇ ಸಂಭಾವನೆಯನ್ನು ನೀಡಲಾಗುವುದಿಲ್ಲ ಮತ್ತು ತಾವು ಕಳುಹಿಸಿಕೊಟ್ಟ ಲೇಖನ ಸಂಬಂಧ ಯಾವುದೇ ಪತ್ರ ವ್ಯವಹಾರ ಮತ್ತು ದೂರವಾಣಿ ಸಂಭಾಷಣೆಗೆ ಅವಕಾಶವಿರುವುದಿಲ್ಲ.
- ಪ್ರಬಂಧಗಳನ್ನು **'itihasadarpana@gmail.com'**ಗೆ ಇ–ಮೇಲ್ ಮಾಡುವುದು.

**–ಸಂಪಾದಕರು**

# ಹುತ್ರಿದುರ್ಗದಲ್ಲಿ ಬೃಹತ್‌ಶಿಲಾಯುಗದ ಸಮಾಧಿಗಳು: ಹೊಸ ಹುಡುಕಾಟ

□ ಹಂ.ಗು.ರಾಜೇಶ್
ಇತಿಹಾಸ ಉಪನ್ಯಾಸಕರು,
ಸ.ಪ.ಪೂ.ಕಾಲೇಜು, ದೊಡ್ಡೇರಿ,
ಬೆಂಗಳೂರು ದಕ್ಷಿಣ ತಾಲ್ಲೂಕು,
ಬೆಂಗಳೂರು.

**ತು**ಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ಹುತ್ರಿದುರ್ಗ ಗ್ರಾಮವು ತನ್ನ ವಿಶಿಷ್ಟ ಭೌಗೋಳಿಕ ಲಕ್ಷಣ ಮತ್ತು ಐತಿಹಾಸಿಕ ಪ್ರಾಮುಖ್ಯತೆಯಿಂದ ಗಮನ ಸೆಳೆದಿದೆ. ತಾಲ್ಲೂಕು ಕೇಂದ್ರ ಕುಣಿಗಲ್‌ನಿಂದ ಆಗ್ನೇಯಕ್ಕೆ 14 ಕಿ.ಮೀ ದೂರದಲ್ಲಿದೆ. ಸುಮಾರು 50 ಮನೆಗಳಿಂದ ಕೂಡಿರುವ ಹುತ್ರಿದುರ್ಗ ಗ್ರಾಮವು ಹುತ್ರಿಬೆಟ್ಟ ಮತ್ತು ಬಸವನಬೆಟ್ಟಗಳ ನಡುವಿನ ಕಿಬ್ಬರಿಯಲ್ಲಿ ಅಂದರೆ ಭೂಮಟ್ಟದಿಂದ ಮೇಲೆತ್ತಲ್ಪಟ್ಟ ಮೈದಾನದಲ್ಲಿರುವುದು ಒಂದು ವಿಶೇಷ. ಈ ಎರಡು ಬೆಟ್ಟಗಳನ್ನು ಬಳಸಿಕೊಂಡು ನಿರ್ಮಿಸಿರುವ ಮೊದಲ ಸುತ್ತಿನ ಕೋಟೆಯನ್ನು ಪ್ರವೇಶಿಸಿದರೆ ಈ ಗ್ರಾಮ ಸಿಗುತ್ತದೆ. ಈ ಕೋಟೆಯನ್ನು ಮಧ್ಯಕಾಲದ ಪಾಳೆಗಾರನಾದ ಮಾಗಡಿಯ ಕೆಂಪೇಗೌಡ ಕಟ್ಟಿಸಿದನೆಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ. ಆದರೆ ಪಶ್ಚಿಮಕ್ಕಿರುವ ಎಲಿಯೂರು ಬಾಗಿಲ ಮೇಲಿನ 1534ರ ಶಾಸನದಲ್ಲಿ ಚೆನ್ನಮನಾಯಕನು ಮುತ್ತನಾಯಕನ ಶಿಷ್ಯನಾದ ಜಂಗಮಯ್ಯನಿಂದ ಯೆಲಯೂರ ದ್ವಾರವನ್ನು ಮಾಡಿಸಿದನೆಂದು ತಿಳಿದುಬರುತ್ತದೆ.[1] ಹುತ್ರಿದುರ್ಗ ಗ್ರಾಮದ ಉತ್ತರದಿಂದ ಬೆಟ್ಟದ ಮೇಲೇರುತ್ತಾ ಹೋದರೆ ಸುಮಾರು ಏಳುಸುತ್ತಿನ ಕೋಟೆಯ ಆವರಣ ಸಿಗುತ್ತದೆ. ಈ ಬೆಟ್ಟವು ಸಮುದ್ರ ಮಟ್ಟದಿಂದ 3708 ಅಡಿ ಎತ್ತರವಿದೆ.[2] ಎಲಿಯೂರು ದ್ವಾರಕ್ಕೆ ಎದುರಾಗಿ ಇರುವ (ಪೂರ್ವ) ದ್ವಾರವನ್ನು ಮಾಗಡಿ ದ್ವಾರ ಎನ್ನುತ್ತಾರೆ. ಈ ದ್ವಾರದಿಂದ ಕಾಡಯ್ಯನ ಮಠದ ದಾರಿಯಲ್ಲಿ ಹೊರನಡೆದರೆ ಮೊದಲು ಎಡಕ್ಕೆ ಒಂದು ಚಿಕ್ಕ ಕಟ್ಟೆ ಸಿಗುತ್ತದೆ. ಇದು ಕಣಿವೆ ಭಾಗವಾಗಿದ್ದು, ಜೌಗು ನೀರಿಗೆ ಈ ಕಟ್ಟೆಯನ್ನು

ನಿರ್ಮಿಸಿದ್ದಾರೆ. ಅಲ್ಲಿಂದ ಮುಂದೆ ಎದುರಾದ ಜೋರೆಯನ್ನು ಏರಿದರೆ ಕೆಂಪುಮಣ್ಣಿನಿಂದ ಕೂಡಿದ ವಿಶಾಲ ಮೈದಾನ ಪ್ರದೇಶ ಗೋಚರಿಸುತ್ತದೆ. ಈ ಪ್ರದೇಶ ಸುತ್ತಲು ಬೆಟ್ಟ ಮತ್ತು ಗುಡ್ಡಗಳಿಂದ ಸುತ್ತುವರಿದಿರುವುದರಿಂದ ಬಟ್ಟಲ ತಳದ ಸಮತಟ್ಟಾದ ಜಾಗದಂತೆ ಗೋಚರಿಸುತ್ತದೆ. ಈ ಜೋರೆಯ ಪ್ರದೇಶದಲ್ಲಿ ಕಬ್ಬಿಣದ ಅದಿರಿನ ಶಿಲೆಗಳು ಹೇರಳವಾಗಿ ಕಂಡುಬರುತ್ತವೆ. ಈ ರಸ್ತೆಯ ಬಲಕ್ಕೆ ಬನ್ನಿಮಂಟಪವಿದೆ. ಇದನ್ನು ಮಹಾನವಮಿ ದಿಬ್ಬ ಎನ್ನುತ್ತಾರೆ ಸ್ಥಳೀಯರು. ಇದರ ಎಡಕ್ಕೆ ಮುಜ್ಜಾಲಮ್ಮನ ಗುಡಿ ಇದೆ. ಈ ಪಾಳು ಬಿದ್ದ ಗುಡಿಯಲ್ಲಿ ವಿಜಯನಗರೋತ್ತರ ಕಾಲಕ್ಕೆ ಸೇರಿದ ಸುಂದರ ದೇವಿಯ ವಿಗ್ರಹವೊಂದಿದೆ. ಬನ್ನಿಮರದಿಂದ ದಕ್ಷಿಣಕ್ಕೆ ಒಂದು ಫರ್ಲಾಂಗ್ ದೂರದಲ್ಲಿ ಬಿಸಿಲ ಬಸವಣ್ಣ ಎಂದು ಕರೆಯುವ ನಂದಿ ವಿಗ್ರಹವೊಂದು ಕಲ್ಲಿನ ವೇದಿಕೆಯ ಮೇಲಿದೆ. ಅಷ್ಟೇನೂ ಆಕರ್ಷಕವಲ್ಲದ ವಿಗ್ರಹವಿದಾಗಿದ್ದು, ವಿಜಯನಗರೋತ್ತರ ಕಾಲದ ರಚನೆಯಂತೆ ಕಂಡುಬರುತ್ತದೆ. ಈ ಬಿಸಿಲ ಬಸವಣ್ಣನ ವೇದಿಕೆಯಿಂದ ಪೂರ್ವಕ್ಕೆ ತಲೆಬುರುಡೆ ಗುಡ್ಡ ಎಂದು ಸ್ಥಳೀಯರು ಕರೆಯುವ ಅಷ್ಟೇನೂ ಎತ್ತರವಿಲ್ಲದ, ವಿಶಾಲವಾಗಿ ಹರಡಿದ ಗುಡ್ಡವಿದೆ. ಈ ಗುಡ್ಡದ ಮೇಲೆ ದೊಡ್ಡ ದೊಡ್ಡ ಕಲ್ಲು ಗುಂಡುಗಳಿವೆ. ಇಷ್ಟೆಲ್ಲವೂ ಹುತ್ರಿದುರ್ಗ ಬೆಟ್ಟದ ಆಗ್ನೇಯ ಭಾಗದಲ್ಲಿ ಕಂಡುಬರುತ್ತವೆ. ಇದಿಷ್ಟು ಹುತ್ರಿದುರ್ಗ ಪರಿಸರದ ಭೌಗೋಳಿಕ ಮೇಲ್ಮೈ ಕಿರು ಪರಿಚಯವಾಗಿದೆ.

ಈ ಪ್ರಬಂಧದ ವಿಷಯದ ಕೇಂದ್ರ ಬಿಂದು ಮುಜ್ಜಾಲಮ್ಮನ ಗುಡಿ ಮತ್ತು ಮಹಾನವಮಿ ದಿಬ್ಬದ ಎದುರಿಗೆ ಇರುವ ಬೃಹತ್ ಶಿಲಾಯುಗ(ಕಬ್ಬಿಣಯುಗ)ಕ್ಕೆ ಸೇರಿದ ವೃತ್ತಾಕಾರದ ಸಮಾಧಿಗಳ ಅವಶೇಷಗಳು. ಈ ಸಮಾಧಿಗಳು ಕೃಷಿ ಭೂಮಿಯಲ್ಲಿರುವುದರಿಂದ ರೈತರು ಅವುಗಳನ್ನು ಶಿಥಿಲಗೊಳಿಸಿ, ಕಲ್ಲುಗಳನ್ನು ಬದುಗಳಿಗೆ ಸರಿಸಿದ್ದಾರೆ. ಆದರೆ ಮುಜ್ಜಾಲಮ್ಮನ ಗುಡಿ ಎದುರಿನ ಹೊಲದಲ್ಲಿ ಶಿಥಿಲಗೊಳ್ಳದ ಕೆಲವು ಸಮಾಧಿಯ ಅವಶೇಷಗಳಿದ್ದವಾದರೂ, ಅವುಗಳಲ್ಲಿ ಒಂದನ್ನು ನಿಧಿ ಶೋಧಕರು ಅಗೆದು ತೆಗೆದಿದ್ದಾರೆ. ಈ ಸಮಾಧಿಗಳು ಸುಮಾರು 12–15 ಅಡಿ ವ್ಯಾಸದ ವೃತ್ತಾಕಾರದಲ್ಲಿ ಜೋಡಿಸಿದ ಕಪ್ಪು ಮತ್ತು ಗ್ರಾನೈಟ್ ಶಿಲೆಗಳಿಂದ ಕೂಡಿವೆ. ನಿಧಿಶೋಧಕರ ಅಗೆತಕ್ಕೆ ಒಳಗಾದ ಸಮಾಧಿಯ ಸಮೀಪದಲ್ಲಿಯೇ ಹಲವು ಮಡಕೆಯ ಚೂರುಗಳು, ಕುಡಿಕೆ ದೊರೆತಿವೆ. ಇವುಗಳಲ್ಲಿ ಕಪ್ಪು ಮತ್ತು ಕೆಂಪು ಮಿಶ್ರಿತ ಮಡಕೆಯ (Black and Red Ware) ಚೂರುಗಳೂ ಸೇರಿವೆ. ಈ ರೀತಿಯ ಮಡಕೆಗಳು ಸಾಮಾನ್ಯವಾಗಿ ಬೃಹತ್ ಶಿಲಾಯುಗದ ಸಮಾಧಿಗಳಲ್ಲಿ ಕಂಡುಬರುವುದುಂಟು.[3] ಕಪ್ಪು ಮತ್ತು ಕೆಂಪು ಮಿಶ್ರಿತ ಮಡಕೆಗಳ ಕಾಲವನ್ನು ಈಗಾಗಲೇ ಪುರಾತತ್ವಶಾಸ್ತ್ರಜ್ಞರು ಗುರುತಿಸಿದ್ದು, ಇದರ ಕಾಲವು ದಕ್ಷಿಣ ಕರ್ನಾಟಕದಲ್ಲಿ ಕ್ರಿ.ಪೂ.1200–250 ಎಂದು ತಜ್ಞರು ಗುರುತಿಸಿದ್ದಾರೆ.[4]

ಇಲ್ಲಿನ ಭೂವೈಲಕ್ಷಣ ಮತ್ತು ಜನರ ಸಾಂಪ್ರದಾಯಿಕ ಆಚರಣೆಗಳು ಬೃಹತ್ ಶಿಲಾಯುಗದ ಜೊತೆಗೆ ತಳಕು ಹಾಕಿಕೊಂಡಿರುವಂತೆ ಕಂಡು ಬರುತ್ತವೆ. ಮೊದಲನೆಯದಾಗಿ ಹುತ್ರಿದುರ್ಗದ ತಪ್ಪಲಿನಿಂದ ಮುಜ್ಜಾಲಮ್ಮನ ಗುಡಿಯ ಸಮೀಪದವರೆಗೂ ಹಾಗೂ ಅಲ್ಲಿನ ಪರಿಸರದಲ್ಲಿ ಅಲ್ಲಲ್ಲಿ ಕಬ್ಬಿಣದ ಅದಿರಿನ ಶಿಲೆಗಳು ಮೇಲ್ಮೈಯಲ್ಲಿ ಸುಲಭವಾಗಿ ದೊರಕುತ್ತವೆ. ಈ ಪ್ರದೇಶವು ಕಬ್ಬಿಣ ಯುಗದ ನೆಲೆಯಾಗಿ ರೂಪುಗೊಳ್ಳಲು ಪೂರಕವಾದ ಅಂಶಗಳಲ್ಲಿ ಇದೂ ಒಂದಾಗಿದೆ. ಬೆಟ್ಟದಿಂದ ಹರಿದು ಬರುವ ನೀರು ಸಮೀಪದಲ್ಲಿಯೇ ಇರುವ ಕಣಿವೆ ಮೂಲಕ ಹಾದು ಹೋಗುವುದರಿಂದ ಈ ಪ್ರದೇಶದಲ್ಲಿ ಎಲ್ಲಾ



ಕಣಿವೆಯಲ್ಲಿರುವ ಕಟ್ಟೆಯ ಹಿನ್ನೆಲೆಯಲ್ಲಿ ಹುತ್ರಿದುರ್ಗ ಬೆಟ್ಟ



ಬಿಸಿಲ ಬಸವಣ್ಣ



ಮುತ್ಯಾಲಮ್ಮದೇವಿ



ತಲೆಬುರುಡೆ ಕಲ್ಲು ಗುಡ್ಡ



ಬೃಹತ್ ಶಿಲಾಯುಗದ ಸಮಾಧಿ



ಹುತ್ರಿದುರ್ಗದ ಭೂಮೇಲ್ಮೈ ನಕ್ಷೆ (ಅಳತೆಗೆ ಒಳಪಟ್ಟದ್ದಲ್ಲ)

ಋತುಗಳಲ್ಲಿಯೂ ನೀರಿನ ಸೆಲೆ ಬತ್ತುವುದಿಲ್ಲ. ಏಕೆಂದರೆ ಬೆಟ್ಟದ ಜೌಗು ನೀರು ಜಿನುಗುತ್ತಿರುತ್ತದೆ. ಈ ಕಿರು ಕಣಿವೆಗೆ ಅಡ್ಡಲಾಗಿ ಒಡ್ಡನ್ನು ಕಟ್ಟಿ ನಿರ್ಮಿಸಿರುವ ಒಂದು ಕಟ್ಟೆ ಇದೆ. ಇದು ಮಧ್ಯಕಾಲದಲ್ಲಿ ನಿರ್ಮಿಸಿರಬಹುದಾದ ಕಟ್ಟೆಯಾದರೂ, ಅದಕ್ಕೂ ಪೂರ್ವದಲ್ಲಿ ನೀರಿನ ಆಸರೆಗಾಗಿ ಈ ಸ್ಥಳದಲ್ಲಿಯೇ ಕುಂಟೆಯೊಂದು ಇದ್ದಿರುವ ಸಾಧ್ಯವಿದೆ.

**ಕಲ್ಲುಸೇವೆ ಆಚರಣೆ:** ಮಾಗಡಿ ಮತ್ತು ಸುತ್ತಮುತ್ತಲ ಪರಿಸರದಲ್ಲಿ ಕಂಡುಬರುವ ಒಂದು ವಿಶಿಷ್ಟ ಆಚರಣೆ ಕಲ್ಲು ಸೇವೆ. ಇದೇ ರೀತಿ ಆಚರಣೆಯು ಹುತ್ರಿದುರ್ಗದ ಪರಿಸರದಲ್ಲಿಯೂ ಇತ್ತೆಂದು ಪ್ರತ್ಯಕ್ಷದರ್ಶಿಗಳು ಹೇಳುತ್ತಾರೆ. ಇಲ್ಲಿನ ಪದ್ಧತಿಯ ಪ್ರಕಾರ ತೊನ್ನು ಇದ್ದವರು ಸತ್ತಾಗ ಅವರ ಶವಗಳನ್ನು ತೆಗೆದುಕೊಂಡು ಹೋಗಿ ತಲೆಬುರುಡೆ ಗುಡ್ಡದಲ್ಲಿ ಬಂಡೆಗಳ ನಡುವೆ ಮಡಕೆಯಲ್ಲಿನ ನೀರಿನೊಂದಿಗೆ ಇಟ್ಟು ಬರುತ್ತಿದ್ದರು. ಹೀಗೆ ಶವವನ್ನು ಪ್ರಾಣಿ ಮತ್ತು ಪಕ್ಷಿಗಳಿಗೆ ಆಹಾರವಾಗಿ ಇಡುತ್ತಿದ್ದರು. ಪ್ರಾಣಿ-ಪಕ್ಷಿಗಳು ತಿಂದು ಉಳಿದ ಮೂಳೆಗಳನ್ನು ಸಂಗ್ರಹಿಸಿ ತಂದು ಹೂಳುತ್ತಿದ್ದರು. ಈ ರೀತಿಯ ಶವಸಂಸ್ಕಾರ ಪದ್ಧತಿಯೊಂದನ್ನು ಬೃಹತ್ ಶಿಲಾಯುಗದ ಕಾಲದಲ್ಲಿಯೂ ಕಾಣಬಹುದು.[5] ಆದ್ದರಿಂದ ಪ್ರಾಗೈತಿಹಾಸಿಕ ಕಾಲದ ಶವಸಂಸ್ಕಾರ ಪದ್ಧತಿಗೂ ಕಲ್ಲುಸೇವೆ ಪದ್ಧತಿಗೂ ಸಂಬಂಧ ಇದೆ ಎಂದೂ, ಇದು ಇಂದಿಗೂ ಅನೂಚಾನವಾಗಿ ಇಲ್ಲಿನ ಸಮಾಜದಲ್ಲಿ ಉಳಿದುಬಂದಿದೆ ಎಂದೂ ಕಾಣುತ್ತದೆ.

ಕುಣಿಗಲ್ ತಾಲ್ಲೂಕಿನ ತಿಪ್ಪಸಂದ್ರ, ಹೇಮಗಿರಿ ಮತ್ತು ಹೇರೂರು ಸಮೀಪದಲ್ಲಿ ಕಬ್ಬಿಣಯುಗಕ್ಕೂ ಪೂರ್ವದ ನೆಲೆಗಳು ಈಗಾಗಲೇ ಪತ್ತೆಯಾಗಿವೆ. ಹುತ್ರಿದುರ್ಗದ ಭೌಗೋಳಿಕ ಪರಿಸರವನ್ನೊಮ್ಮೆ ಅವಲೋಕಿಸಿದರೆ ಇಲ್ಲಿಯೂ ಕಬ್ಬಿಣಯುಗಕ್ಕೂ ಪೂರ್ವದ ನೆಲೆಗಳಿದ್ದಿರಬಹುದಾದ ಸಾಧ್ಯತೆಗಳಿವೆ. ಈ ನಿಟ್ಟಿನಲ್ಲಿ ಮತ್ತಷ್ಟು ಕ್ಷೇತ್ರಕಾರ್ಯ, ಸಂಶೋಧನೆಗಳು ನಡೆಯಬೇಕಿದೆ.

---

ಕೃತಜ್ಞತೆಗಳು: -ಕ್ಷೇತ್ರಕಾರ್ಯದ ವೇಳೆ ನೆರವಾದ ಗೆಳೆಯರಾದ ಎಂ. ಪ್ರಕಾಶಮೂರ್ತಿ, ಪುಟ್ಟರಾಜು (ಇತಿಹಾಸ ಉಪನ್ಯಾಸಕರು) ಅವರಿಗೂ, ಸ್ಥಳೀಯ ಗ್ರಾಮಸ್ಥರಿಗೂ ಹಾಗೂ

-ಈ ಶೋಧವನ್ನು ದೃಢೀಕರಿಸಿದ ಮತ್ತು ಈ ಬಗ್ಗೆ ಹೆಚ್ಚಿನ ಮಾಹಿತಿ ತಿಳಿಸಿಕೊಟ್ಟ ಆತ್ಮೀಯರೂ, ಐ.ಸಿ.ಎಚ್.ಆರ್. ದಕ್ಷಿಣ ಪ್ರಾದೇಶಿಕ ಕಛೇರಿಯ ಉಪನಿರ್ದೇಶಕರೂ ಆದ ಎಸ್.ಕೆ. ಅರುಣಿ ಅವರಿಗೂ ನನ್ನ ಕೃತಜ್ಞತೆಗಳು.

## ಕೊನೆ ಟಿಪ್ಪಣಿ

1. ಎಪಿಗ್ರಾಫಿಯಾ ಕರ್ನಾಟಿಕ (ಹೊಸ ಆವೃತ್ತಿ) ಸಂ.24, ಕುಣಿಗಲ್ ಶಾಸನ ಸಂ.88.
2. Mysore State Gazetteer-Tumkur District, 1969, Pp.583.
3. Gururaja Rao B.K.- *The Megalithic Culture in South india*. Mysore University, 1972, pp.258.
4. ಶಿವತಾರಕ್ ಕೆ.ಜಿ., ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, 2001. ಪು:20 ಮತ್ತು ನೋಡಿ: Upinder Singh. *A History of Ancient and Early Medieval India*. Pearson. New delhi, 2009. pp.239.
5. ಸುಂದರ. ಅ. (ಸಂ.) *ಕರ್ನಾಟಕ ಚರಿತ್ರೆ ಸಂಪುಟ-1*. ಕನ್ನಡ ವಿ.ವಿ. ಹಂಪಿ, 1997, ಪು:180.

■

# ಒಕ್ಕಲಿಗರು ಒಕ್ಕಲಿಗರ ಪ್ರಭೇದಗಳು ಸ್ಥಿತ್ಯಂತರ–ಸಂಘರ್ಷ–ಸಾಮರಸ್ಯ*

□ ಎಂ.ಎಚ್.ನಾಗರಾಜು
ಇತಿಹಾಸ ಉಪನ್ಯಾಸಕರು,
ಸ.ಪ.ಪೂ.ಕಾಲೇಜು, ಗುಬ್ಬಿ,
ತುಮಕೂರು–ಜಿಲ್ಲೆ.

**ಭೂ**ಮಿಯ ಉಗಮ–ವಿಕಾಸ ಹಾಗೂ ಜೀವಜಾಲ ಪ್ರಭೇದಗಳ ಉಗಮ–ವಿಕಾಸಗಳ ಇತಿಹಾಸದ ಸುದೀರ್ಘ ಕಾಲಘಟ್ಟವನ್ನು ಅವಲೋಕಿಸಿದಾಗ ಮಾನವ ಉಗಮವಾಗಿದ್ದು ತುಂಬ ಇತ್ತೀಚೆಗೆ. ಅದರಲ್ಲೂ ಆಧುನಿಕ ಮಾನವ ವಿಕಾಸವಾದುದ್ದು ಕೇವಲ ಐವತ್ತು ಸಾವಿರ ವರ್ಷಗಳ ಹಿಂದೆಯಷ್ಟೆ. ಭೂಮಿಯನ್ನು ಉಳುಮೆ ಮಾಡದ, ಆಹಾರ ಧಾನ್ಯಗಳನ್ನು ಬಿತ್ತಿಬೆಳೆಯದ, ಕೇವಲ ಗೆಡ್ಡೆಗೆಣಸುಗಳನ್ನು, ಹಸಿಮಾಂಸವನ್ನು ತಿನ್ನುತ್ತಿದ್ದ ಅಲೆಮಾರಿ ಮಾನವ, ತನ್ನ ಅಲೆಮಾರಿತನಕ್ಕೆ ವಿದಾಯ ಹೇಳಿ ಸ್ಥಿರಬದುಕು ನಡೆಸಲಾರಂಭಿಸಿದ್ದು, ವಿಸ್ತೃತವಾದ ನಾಗರಿಕತೆಯನ್ನು ಅದರೊಳಗಿನ ಅನನ್ಯವಾದ ಹಲವು ಸಂಸ್ಕೃತಿಗಳನ್ನು ರೂಪಿಸಿಕೊಂಡಿದ್ದು ಎಂಟು–ಹತ್ತು ಸಾವಿರ ವರ್ಷಗಳಿಂದೀಚೆಗೆ ಮಾತ್ರ.

ಮಾನವ ಕುಲ ಬೆಳೆದು ಬಂದ ಇತಿಹಾಸ ಒಂದು ರೋಚಕವಾದ ಅಧ್ಯಯನ, ಆಸಕ್ತಿದಾಯಕವಾದ ಕಥೆ. ಇವತ್ತಿನ ಎಲ್ಲ ಸಮುದಾಯಗಳು ಸಾಮಾಜಿಕವಾಗಿ ಮೂರು ಮುಖ್ಯ ಹಂತಗಳನ್ನು ದಾಟಿ ಬಂದಿವೆ. ಇಲ್ಲವೆ ಏಕಕಾಲದಲ್ಲಿ ಮೂರು ಹಂತಗಳಲ್ಲಿಯೂ ಜೀವನ ಸಾಗಿಸುತ್ತಿವೆ. ಈ ಮೂರು ಹಂತಗಳನ್ನು ನಾವು ಬುಡಕಟ್ಟುಗಳು–ನಡುಕಟ್ಟುಗಳು–ತಲೆಕಟ್ಟುಗಳು [1] ಎಂದು ಕರೆಯುಬಹುದಾಗಿದೆ.

---

* ಈ ಪ್ರಬಂಧವು ದಿ:12–11–2013ರಂದು ಬೆಂಗಳೂರಿನಲ್ಲಿ ನಡೆದ 'ಒಕ್ಕಲಿಗರು–ಉಳುಮೆಯಿಂದ ಉನ್ನತಿಯೆಡೆಗೆ' ರಾಜ್ಯಮಟ್ಟದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧದ ಪರಿಷ್ಕೃತ ಆವೃತ್ತಿಯಾಗಿದೆ.

ಎಲ್ಲ ಪ್ರಾಣಿಗಳಂತೆ ಮಾನವ ಸಹ ಒಂದು ಸಹಜ ಪ್ರಾಣಿ. ಈ ಮಾನವ ಪ್ರಾಣಿಯೂ ಸಹ ಮೊದಲಿಗೆ ಕುರಿಗಳ ಮಂದೆ ಅಥವಾ ಆನೆಗಳ ಹಿಂಡಿನಂತೆ ತನ್ನ ಸಂಗಾತಿ-ಪರಿವಾರದೊಂದಿಗೆ ಗುಂಪು ಗುಂಪಾಗಿ ವಾಸಿಸುತ್ತಿದ್ದ. ವಿಶಿಷ್ಟವಾದ ವಿಭಿನ್ನವಾದ ಜೀವನಕ್ರಮವನ್ನು, ಸಂಸ್ಕೃತಿಯನ್ನು, ಒಳಾಡಳಿತ ವ್ಯವಸ್ಥೆಯನ್ನು, ಸಾಂಸ್ಕೃತಿಕ ಚಹರೆಗಳನ್ನು ಹೊಂದಿದ್ದ. ಇಂತಹ ಮಾನವ ಗುಂಪುಗಳ ಹೊರಬದುಕು ಒಂದೇ ಆಗಿದ್ದರೂ ಒಳಬದುಕು, ಆಚಾರ ವಿಚಾರ ವಿಭಿನ್ನವಾಗಿತ್ತು. ಆದಿಮ ಕಾಲದ ಇಂತಹ ಅಸಂಖ್ಯಾತ ಮಾನವ ಗುಂಪುಗಳೇ ಬುಡಕಟ್ಟುಗಳು. ಇವು ಸಾಮಾಜಿಕ ರಚನೆಯ ಅಡಿಪಾಯಗಳು. ಮತ್ತು ನಾಗರೀಕ ಸಮಾಜದ ಆಧಾರಸ್ತಂಭಗಳು.

ಇಂತಹ ಬುಡಕಟ್ಟುಗಳು ಆರಂಭದಲ್ಲಿ ಅಲೆಮಾರಿಗಳಾಗಿದ್ದವು. ಆಹಾರ, ಅಸ್ತಿತ್ವ, ಅಧಿಪತ್ಯ, ಆವಾಸಸ್ಥಾನಗಳಿಗಾಗಿ ಪರಸ್ಪರ ಸೆಣೆಸುತ್ತಿದ್ದವು, ಹೊಡೆದಾಡುತ್ತಿದ್ದವು. ತಮ್ಮ ತಮ್ಮ ಬುಡಕಟ್ಟುಗಳ ಆಚಾರ-ವಿಚಾರ-ಶಿಸ್ತು-ಶ್ರೇಷ್ಠತೆಗಳನ್ನು ಉಳಿಸಿಕೊಳ್ಳಲು ಹೆಣಗುತಿದ್ದವು. ಅನ್ಯ ಬುಡಕಟ್ಟುಗಳೊಂದಿಗೆ ಬೆರೆತರೆ, ವಿವಾಹದ ಮೂಲಕ, ರಕ್ತ ಸಂಬಂಧ ಸ್ಥಾಪಿಸಿದರೆ ತಮ್ಮ ಕುಲ-ಶೀಲ-ಪಾವಿತ್ರ್ಯತೆ ಹಾಳಾಗುತ್ತದೆ ಎಂಬ ನಂಬಿಕೆಯನ್ನು ಹೊಂದಿದ್ದವು. ಯಾವಾಗಲೂ ಪ್ರತ್ಯೇಕವಾಗಿ ಏಕಾಂಗಿಯಾಗಿ ಇರಲು ಬಯಸುತ್ತಿದ್ದವು. ಈ ಬುಡಕಟ್ಟುಗಳ ಅವಸ್ಥೆ ಆಧುನಿಕ ಮಾನವನ ಬದುಕಿನ ಮೊದಲ ಹಂತ.

ಕಾಲ ಸರಿದಂತೆ, ಬುದ್ಧಿವಿಕಾಸವಾದಂತೆ ಬಹುತೇಕ ಬುಡಕಟ್ಟುಗಳು ತಮ್ಮ ಅಲೆಮಾರಿ ಬದುಕಿಗೆ ವಿದಾಯ ಹೇಳಿದವು. ಆಹಾರದ ಹುಡುಕಾಟ-ಸಂಗ್ರಹಣೆಯನ್ನು ತೊರೆದು ಆಹಾರದ ಉತ್ಪಾದನೆಗೆ ಇಳಿದವು. ಬೇಟೆ ಸಂಸ್ಕೃತಿಯನ್ನು ತೊರೆದು ಕೃಷಿ ಮತ್ತು ಪಶುಪಾಲನ ಸಂಸ್ಕೃತಿಯತ್ತ ಹೊರಳಿದವು, ಸ್ಥಿರಬದುಕು ನಡೆಸಲಾರಂಭಿಸಿದವು. ಕೃಷಿ ಮತ್ತು ಪಶುಪಾಲನೆಗೆ ಪೂರಕವಾಗಿ ಕಮ್ಮಾರಿಕೆ, ಕುಂಬಾರಿಕೆ, ಬಡಗಾರಿಕೆ, ಸ್ವರ್ಣಗಾರಿಕೆ, ನೇಕಾರಿಕೆ, ಮೀನುಗಾರಿಕೆ ಇತ್ಯಾದಿ ಇತ್ಯಾದಿ ನೂರಾರು ಕಸುಬುಗಳು ಸೃಷ್ಠಿಯಾದವು. ಕೃಷಿ ಪ್ರಧಾನವಾಯಿತು, ಇನ್ನುಳಿದವು ಪೂರಕವಾದವು. ಕೃಷಿ ಸಂಸ್ಕೃತಿ-ಗ್ರಾಮ ಸಂಸ್ಕೃತಿ ಅಸ್ತಿತ್ವಕ್ಕೆ ಬಂದಿತು. ಅಗತ್ಯ, ಅನಿವಾರ್ಯ, ಅವಶ್ಯಕತೆಗಳಿಗನುಗುಣವಾಗಿ ಬುಡಕಟ್ಟುಗಳು ಒಂದೊಂದು ಕಸುಬನ್ನು, ವೃತ್ತಿಯನ್ನು ಆಯ್ದುಕೊಂಡವು. ಕುಲಕಸುಬ ನ್ನಾಗಿಸಿಕೊಂಡವು. ಪಾರಂಪರಿಕವಾಗಿ ಮುಂದುವರೆಸಿಕೊಂಡು ಬಂದವು. ಹೀಗೆ ಕುಲಕಸುಬು ಅವಲಂಬಿಸಿ ಸಾವಿರಾರು ವರ್ಷಗಳಿಂದ ಸಾಗಿಬಂದ ಎಲ್ಲ ಬುಡಕಟ್ಟುಗಳು ಒಂದೊಂದು ಜಾತಿಯಾಗಿ ಪರಿವರ್ತನೆಯಾದವು.

ಕ್ರಿಸ್ತಶಕ ಹನ್ನೆರಡನೆಯ ಶತಮಾನದ ಸಾಮಾಜಿಕ ಮತ್ತು ಧಾರ್ಮಿಕ ಚಳವಳಿಯ ನೇತಾರ ಬಸವಣ್ಣನವರು ತಮ್ಮದೊಂದು ವಚನದಲ್ಲಿ ಹೇಳಿದಂತೆ 'ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ.' ಅದೇ ರೀತಿ ಒಕ್ಕಲುತನ ಮಾಡಿ ಒಕ್ಕಲಿಗನಾದ, ದನಕರು ಮೇಯಿಸಿ ಗೊಲ್ಲನಾದ, ಕುರಿ ಸಾಕಣೆ ಮಾಡಿ ಕುರುಬನಾದ. ಕಮ್ಮಾರ, ಕುಂಬಾರ, ಚಮ್ಮಾರ, ನೇಕಾರ, ತ್ಯಾಗಾರ, ಬಳೆಗಾರ, ಸುಣ್ಣಗಾರ, ಬಣ್ಣಗಾರ, ಮೀನುಗಾರ....ಹೀಗೆ ವೃತ್ತಿಮೂಲದ ಜಾತಿಗಳು ಸೃಷ್ಠಿಯಾದವು. ಈ ರೀತಿ ಹುಟ್ಟಿಕೊಂಡ ಜಾತಿಗಳೇ ಬುಡಕಟ್ಟುಗಳು, ಆಧುನಿಕ ಮಾನವನ ಸುದೀರ್ಘ

ಇತಿಹಾಸದಲ್ಲಿ ಪಯಣದಲ್ಲಿ ಇದು ಎರಡನೇ ಹಂತ. ಹೀಗೆ ಹುಟ್ಟಿಕೊಂಡ ಒಂದೊಂದು ಜಾತಿಯಿಂದ ಒಂದೊಂದು ಸಂಸ್ಕೃತಿ–ಪರಂಪರೆ ಸೃಷ್ಟಿಯಾಯಿತು. ಭಾರತ ಬಹುಸಂಸ್ಕೃತಿಯ ನಾಡಾಯಿತು.

ಇದಾಗಿ ಎಷ್ಟೋ ವರ್ಷಗಳ ನಂತರ ಮಾನವನ ಬೌದ್ಧಿಕ ಶಕ್ತಿ ಮತ್ತಷ್ಟು ವಿಕಾಸವಾದಂತೆ ವಿಸ್ತಾರವಾದಂತೆ ಅನೇಕ ದಾರ್ಶನಿಕರು ಹುಟ್ಟಿದರು. ಹೊಸ ಹೊಸ ವಿಚಾರಗಳನ್ನು, ದಿವ್ಯ ಸಂದೇಶಗಳನ್ನು ಬೋಧಿಸಿದರು. ಅವರಿಂದ ಆತ್ಮ–ಪರಮಾತ್ಮ–ಅಧ್ಯಾತ್ಮ–ಧಾರ್ಮಿಕ ಮತ್ತಿತರ ವಿಚಾರಗಳು ಬೆಳೆದು ಬಂದವು. ಈ ವಿಚಾರಗಳಿಗೆ ಪೂರಕವಾಗಿ ವಿಶಿಷ್ಟ ಆಚರಣೆಗಳೂ ರೂಢಿಗೆ ಬಂದವು. ಒಂದೇ ಸತ್ಯವನ್ನು ಒಬ್ಬೊಬ್ಬ ದಾರ್ಶನಿಕ ಒಂದೊಂದು ರೀತಿಯಲ್ಲಿ ಹೇಳಲಾಗಿ ಹೊಸ ಹೊಸ ಮತಗಳು ಜನ್ಮತಾಳಿದವು. ಈ ಮತಗಳೇ ಧರ್ಮಗಳು ಎಂಬ ಹೆಸರಿನಿಂದ ಕರೆಯಲ್ಪಟ್ಟವು. ಈ ಎಲ್ಲ ಮತಧರ್ಮಗಳ ಆಚಾರ್ಯರುಗಳು ಮತ್ತು ಪ್ರಚಾರಕರುಗಳ ಬೋಧನೆ, ಪ್ರಭಾವ, ಪ್ರಲೋಭನೆಗಳಿಗೆ ಒಳಗಾಗಿ ಸಾವಿರಾರು ಪಾರಂಪರಿಕ ಕುಲಕಸುಬು ಆಧಾರಿತ ಜಾತಿಗಳ ಜನರು ದೀಕ್ಷೆಯ ಮೂಲಕ ಕಾಲಕಾಲಕ್ಕೆ ಉದಿಸಿದ, ಪ್ರಭಾವಿಸಿದ ಹೊಸ ಹೊಸ ಮತ–ಧರ್ಮಗಳನ್ನು ಸ್ವೀಕರಿಸಿದರು. ಇಂತಹ ದೀಕ್ಷಾ ಸಮಾರಂಭಗಳನ್ನು ಮತಾಂತರ ಎಂದೂ ಕರೆಯಬಹುದು.

ಹೀಗೆ ದೀಕ್ಷೆ ಪಡೆದವರು ತಮ್ಮ ಮೂಲಜಾತಿಗಳ ವಿಸ್ಮೃತಿಗೆ ಒಳಗಾದರು. ಮೂಲ ಕಸುಬು ಆಧಾರಿತ ಜಾತಿಗಳನ್ನು ಮರೆತು ಹೊಸ ಮತಧರ್ಮಗಳ ಹೆಸರುಗಳಿಂದ ಗುರುತಿಸಿಕೊಂಡರು. ಮೂಲ ಸಂಸ್ಕೃತಿ ನಾಶವಾಯಿತು, ವೈವಿಧ್ಯತೆ ಹಾಳಾಯಿತು. ಇದನ್ನೇ ಮೇಲ್ಮುಖ ಚಲನೆ ಎಂದು ಸಮಾಜ ಶಾಸ್ತ್ರಜ್ಞರು ಕರೆಯುವುದು. ಹೀಗಾಗಿ ವೈದಿಕ, ವೈಷ್ಣವ, ಶೈವ, ಶಾಕ್ತ, ವೀರಶೈವ, ಜೈನ, ಬೌದ್ಧ, ಸಿಖ್ಖ, ಮುಸ್ಲಿಮ, ಕ್ರೈಸ್ತ ಮೊದಲಾದ ಮತಧರ್ಮಗಳು ಬೆಳೆದು ಬಂದವು. ಹೀಗೆ ಅಸಂಖ್ಯಾತ ಕಸುಬು ಆಧಾರಿತ ಜಾತಿಗಳ ಪ್ರವೇಶದಿಂದ ಹುಟ್ಟಿಕೊಂಡ ಮತಧರ್ಮಗಳೇ ತಲೆಕಟ್ಟುಗಳು.

ಇವು ಕಾಲಕಾಲಕ್ಕೆ ಸಂಭವಿಸಿದ ಸಾಮಾಜಿಕ ಪ್ರಕ್ರಿಯೆಗಳು, ಧಾರ್ಮಿಕ ಪರಿವರ್ತನೆಗಳು. ಬುಡಕಟ್ಟು ಮತ್ತು ನಡುಕಟ್ಟುಗಳ ಸುದೀರ್ಘವಾದ ಇತಿಹಾಸ ಸಂಸ್ಕೃತಿ ಮತ್ತು ಪರಂಪರೆಗೆ ಹೋಲಿಸಿದರೆ, ತಲೆಕಟ್ಟುಗಳ ಇತಿಹಾಸ ಸಂಸ್ಕೃತಿ ಮತ್ತು ಪರಂಪರೆ ತುಂಬ ಚಿಕ್ಕದು. ಕಾಲದ ದೃಷ್ಟಿಯಲ್ಲಿ ಇವುಗಳ ವ್ಯಾಪ್ತಿ ತುಂಬ ಕಿರಿದು.

ಕಾಲಕಾಲಕ್ಕೆ ಆದ ಇಂತಹ ಸಾಮಾಜಿಕ ಪ್ರಕ್ರಿಯೆಗಳಿಗೆ ಒಳಗಾಗಿ, ಲಕ್ಷಾಂತರ ಸಂಖ್ಯೆಯಲ್ಲಿದ್ದ ಬುಡಕಟ್ಟುಗಳು ಸುಮಾರು ಮೂರು ಸಾವಿರದಷ್ಟು ಜಾತಿಗಳಾದವು, ಈ ಮೂರು ಸಾವಿರದಷ್ಟು ಜಾತಿಗಳು ಎಂಟರಿಂದ ಹತ್ತು ಧರ್ಮಗಳಾದವು. ಹೀಗೆ ಕಾಲಚಕ್ರದಲ್ಲಿ ಬುಡಕಟ್ಟುಗಳು–ನಡುಕಟ್ಟುಗಳು–ತಲೆಕಟ್ಟುಗಳು ಎಂಬ ಮೂರು ಹಂತದ ಸ್ತರದ ಸಾಮಾಜಿಕ ಶ್ರೇಣಿ ಅಂದರೆ ಪಿರಮಿಡ್ ರಚನೆಯಾಯಿತು.

ಮನುಕುಲ ಎಂಬ ಮಹಾವೃಕ್ಷದಲ್ಲಿ ಬುಡಕಟ್ಟುಗಳು ಬೇರುಗಳಿದ್ದಂತೆ, ಜಾತಿಗಳು ಕಾಂಡಗಳಿದ್ದಂತೆ, ಧರ್ಮಗಳು ಹೂವು ಹಣ್ಣುಗಳಿದ್ದಂತೆ.

ವಿಪರ್ಯಾಸವೆಂದರೆ ಈ ಪ್ರಕ್ರಿಯೆಗಳು ಪೂರ್ಣ ಪ್ರಮಾಣದಲ್ಲಿ ನಡೆಯಲಿಲ್ಲ. ಎಲ್ಲಾ ಬುಡಕಟ್ಟುಗಳು ನಡುಕಟ್ಟುಗಳಾಗಲಿಲ್ಲ. ಎಲ್ಲಾ ನಡುಕಟ್ಟುಗಳು ತಲೆಕಟ್ಟುಗಳಾಗಲಿಲ್ಲ.

ಕೆಲವು ಆದವು, ಕೆಲವು ಹಾಗೇ ಉಳಿದವು. ಮತ್ತೆ ಕೆಲವು ಭಾಗಶಃ ಆದವು. ಈ ಬೆಳವಣಿಗೆಯನ್ನು ಪ್ರಕ್ರಿಯೆಯನ್ನು ಒಂದು ಓಟದ ಸ್ಪರ್ಧೆಗೆ ಹೋಲಿಸಬಹುದು. ಈ ಓಟದ ಸ್ಪರ್ಧೆಯಲ್ಲಿ ಕೆಲವು ಗುರಿಮುಟ್ಟಿದವು. ಕೆಲವು ಸ್ವಲ್ಪ ದೂರ ಮಾತ್ರ ಕ್ರಮಿಸಿದವು. ಕೆಲವು ಇದ್ದಲ್ಲಿಯೇ ಉಳಿದವು. ಹೀಗಾಗಿ ಭಾರತೀಯ ಸಮಾಜದಲ್ಲಿ ಇಂದಿಗೂ ಅಲೆಮಾರಿ ಬುಡಕಟ್ಟುಗಳು, ಅರೆಅಲೆಮಾರಿ ಬುಡಕಟ್ಟುಗಳು, ಸ್ಥಿರವಾಗಿ ನೆಲೆನಿಂತ ಬುಡಕಟ್ಟುಗಳು, ವ್ಯವಸ್ಥಿತವಾದ ಜಾತಿಗಳು, ಅವುಗಳ ಮುಂದುವರೆದ ಭಾಗಗಳಾದ ಮತಧರ್ಮಗಳು ಏಕಕಾಲಕ್ಕೆ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ. ಇದು ಸಾಮಾಜಿಕ ಏರುಪೇರಿಗೆ, ಏಣಿ ಶ್ರೇಣಿಗೆ, ಮೇಲುಕೀಳಿಗೆ ಕಾರಣವಾಗಿದೆ.

ಇನ್ನು ಒಕ್ಕಲಿಗರಿಗೆ ಬರೋಣ. ಬುಡಕಟ್ಟು–ನಡುಕಟ್ಟು–ತಲೆಕಟ್ಟು ಈ ಮೂರು ಸ್ತರಗಳಲ್ಲಿಯೂ ಹರಿದು ಹಂಚಿಹೋಗಿರುವ, ಮುಖ್ಯವಾಗಿ ನಡುಕಟ್ಟು ಸ್ತರದಲ್ಲಿ ಎದ್ದು ಕಾಣುವ ಒಕ್ಕಲಿಗನ ಕುಲಕಸುಬು, ಪಾರಂಪರಿಕ ವೃತ್ತಿ ಒಕ್ಕಲುತನ. ಇದು ಭಾರತ ದೇಶದ ಮೂಲವೃತ್ತಿಗಳಲ್ಲಿ, ಕಸುಬುಗಳಲ್ಲಿ ಒಂದು. ನೇಗಿಲ ಯೋಗಿಯ ಕಾಯಕ. ಇವತ್ತು ಬೇರೆ ಬೇರೆ ವೃತ್ತಿ ಮೂಲದ ಜನರು ಆಸಕ್ತಿ ಅಥವಾ ಅನಿವಾರ್ಯ ಕಾರಣಗಳಿಂದ ಕೃಷಿ ಕಾಯಕ ಮಾಡುತ್ತಾರೆ. ಹಾಗಂತ ಅವರೆಲ್ಲ ಒಕ್ಕಲಿಗರಲ್ಲ. ಹೊಲವನ್ನು ಉತ್ತು, ಬಿತ್ತಿ, ಬೆಳೆ ಬೆಳೆಯುವ ಕಾಯಕವನ್ನು ಒಕ್ಕುವುದು, ಒಕ್ಕಲಾಟ, ಒಕ್ಕಲುತನ ಎಂದು ಕರೆಯಲಾಗುತ್ತದೆ. ಇಂತಹ ಒಕ್ಕಲುತನವನ್ನು ಕುಲಕಸುಬನ್ನಾಗಿಸಿಕೊಂಡು, ಜೀವನ ಧರ್ಮವನ್ನಾಗಿಸಿಕೊಂಡು ಪರಂಪರೆಯಿಂದ ಸಾಗಿಬಂದವರೇ ಒಕ್ಕಲಿಗರು. ಅಂತಹ ಒಕ್ಕಲಿಗ ಕುಟುಂಬಗಳಿಂದ, ಮನೆತನಗಳಿಂದ ಬಂದವರು ಇಂದು ನಗರದಲ್ಲಿ ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿದ್ದರೂ ಒಕ್ಕಲಿಗರು.

ಇತ್ತೀಚೆಗೆ, ಬದಲಾದ ಕಾಲಮಾನದಲ್ಲಿ ಒಕ್ಕಲುತನದ ಮೇಲಿನ ಅವಲಂಬನೆ ಸ್ವಲ್ಪಮಟ್ಟಿಗೆ ಕಡಿಮೆಯಾಗಿದ್ದರೂ, ಹಲವು ಸಾವಿರ ವರ್ಷಗಳಿಂದ ಭಾರತ ಕೃಷಿ ಪ್ರಧಾನ ದೇಶ. ಹಳ್ಳಿಗಳನಾಡು. ಗ್ರಾಮಸಂಸ್ಕೃತಿಯ ಬೀಡು. ಶೇ.90 ರಷ್ಟು ಜನರು ಭಾರತದಲ್ಲಿ ಒಕ್ಕಲುತನದ ಮೇಲೆ ಅವಲಂಬಿತರಾಗಿದ್ದರು[2] ಎಂಬ ಮಾಹಿತಿ ಗ್ರೀಕ್ ಬರಹಗಾರ ಮೆಗಾಸ್ತನೀಸ್‌ನ ಬರವಣಿಗೆಯಲ್ಲಿ ದೊರೆಯುತ್ತದೆ. ಬಹು ಜನರಿಗೆ ಅನ್ನ ನೀಡುವ ಪ್ರಧಾನ ಉದ್ಯೋಗ ಒಕ್ಕಲುತನವಾಗಿದ್ದರಿಂದಲೇ ನೂರಾರು ಅಲೆಮಾರಿ ಬುಡಕಟ್ಟುಗಳು ಈ ವೃತ್ತಿಗೆ ಇಳಿದವು. ಕುಲಕಸುಬು ಮಾಡಿಕೊಂಡವು. ಹೀಗಾಗಿ ಈ ಎಲ್ಲ ಬುಡಕಟ್ಟುಗಳು ಒಕ್ಕಲಿಗ ಬುಡಕಟ್ಟುಗಳಾದವು. ಈ ಒಕ್ಕಲಿಗ ಬುಡಕಟ್ಟುಗಳ ಜನರು ಒಕ್ಕಲಿಗರಾದರು.

ಇಲ್ಲಿ ಒಕ್ಕಲಿಗ ಎಂಬುದು ಒಂದು ವೃತ್ತಿಯೇ? ಜಾತಿಯೇ? ಎಂಬ ಪ್ರಶ್ನೆ ಮೂಡುತ್ತದೆ. ಖಂಡಿತವಾಗಿ ಒಕ್ಕಲಿಗ ಎಂಬುದು ಒಂದು ವೃತ್ತಿಯಾಗಿದೆ. ಅದೇ ರೀತಿ ಒಂದು ಜಾತಿಯೂ ಆಗಿದೆ. ಇದರಲ್ಲಿ ಯಾವುದೇ ಸಂದೇಹಗಳಿಲ್ಲ. ಇಲ್ಲಿ ಗಮನಿಸಬೇಕಾದ ಒಂದು ವಿಚಾರವೆಂದರೆ ಒಕ್ಕಲಿಗ ಎಂಬುದು ಒಂದು ಜಾತಿಯಾದರೂ ಒಂದೇ ಬುಡಕಟ್ಟು ಅಲ್ಲ. ದೊಡ್ಡ ಸಂಖ್ಯೆಯ, ಸಣ್ಣ ಸಂಖ್ಯೆಯ ನೂರಾರು ಬುಡಕಟ್ಟುಗಳು ಒಕ್ಕಲುತನವನ್ನು ಕುಲಕಸುಬು ಮಾಡಿಕೊಂಡು ಪರಂಪರೆಯಿಂದ ಸಾಗಿಬಂದು ಒಕ್ಕಲಿಗ ಜಾತಿಯಾದವು ಎಂಬುದನ್ನು ಮರೆಯಲಾಗದು.

ಹೀಗಾಗಿ ಒಕ್ಕಲಿಗರಲ್ಲಿ ಮೇಲುಕೀಳು ಇಲ್ಲದ, ಏಣಿಶ್ರೇಣಿ ಇಲ್ಲದ ನೂರಾರು ಸಮಾನಾಂತರ ಬುಡಕಟ್ಟುಗಳಿವೆ. ಈ ಸಮಾನಾಂತರ ಬುಡಕಟ್ಟುಗಳೇ ಒಕ್ಕಲಿಗ ಜಾತಿಯ ಪ್ರಭೇದಗಳಾಗಿವೆ. ಪಂಗಡಗಳಾಗಿವೆ. ವೈವಿಧ್ಯತೆಯ ಮೂಲಗಳಾಗಿವೆ. ವಿಶೇಷವೆಂದರೆ ಪ್ರತಿಯೊಂದು ಒಕ್ಕಲಿಗ ಪ್ರಭೇದಗಳ ಆಂತರಿಕ ಬದುಕು ಇನ್ನೊಂದಕ್ಕಿಂತ ಭಿನ್ನವಾಗಿದೆ, ವಿಶಿಷ್ಟವಾಗಿದೆ. ಅದರದೇ ಆದ ಗೋತ್ರಗಳಿವೆ, ಸೂತ್ರಗಳಿವೆ. ಒಳಾಡಳಿತ ವ್ಯವಸ್ಥೆ ಇದೆ. ಕಟ್ಟೆಮನೆಗಳಿವೆ, ಗುರುಮನೆಗಳಿವೆ. ಸಾಮಾಜಿಕ ಸಂಸ್ಕಾರಗಳಿವೆ, ಕಟ್ಟುಪಾಡುಗಳಿವೆ. ಇವೆಲ್ಲ ಹುಟ್ಟು, ಸಾವು, ಸೂತಕ, ಮದುವೆ, ಮುಂಜಿ, ಹಬ್ಬ-ಹರಿದಿನಗಳು, ಪೂಜೆ ಪುನಸ್ಕಾರಗಳ ಆಚರಣೆಯ ಸಂದರ್ಭಗಳಲ್ಲಿ ಕಂಡುಬರುತ್ತವೆ. ಆದರೆ ಎಲ್ಲಾ ಪ್ರಭೇದಗಳ ಬಾಹ್ಯಬದುಕು, ಕೃಷಿ ಬದುಕು, ಬೆವರಿನ ಬದುಕು, ಶ್ರಮ ಸಂಸ್ಕೃತಿ ಒಂದೇ ಆಗಿದೆ. ಎಲ್ಲ ಪ್ರಭೇದಗಳನ್ನು ಒಂದು ಸೂತ್ರದಲ್ಲಿ ಒಗ್ಗೂಡಿಸುವ 'ಕಾಮನ್ ಕಾಸ್' ಆಗಿದೆ. ಪರಸ್ಪರ ಕೊಡುಕೊಳ್ಳುವ ವೈವಾಹಿಕ ಸಂಬಂಧವನ್ನು ಹೊರತು ಪಡಿಸಿ , ಇನ್ನುಳಿದಂತೆ ಅವುಗಳ ಜೀವನ ಕ್ರಮದಲ್ಲಿ, ಸಂಸ್ಕೃತಿಯಲ್ಲಿ ಸಾಮ್ಯತೆ ಇದೆ, ಏಕತೆ ಇದೆ. ನಾವೆಲ್ಲ ರೈತರು, ನೇಗಿಲಯೋಗಿಗಳು, ಮಣ್ಣಿನ ಮಕ್ಕಳು, ಒಕ್ಕಲಿಗರು, ಎಂಬ ಸಮಾನ ಅಭಿಪ್ರಾಯವಿದೆ, ಅಭಿಮಾನವಿದೆ.

ವಿಷಾದದ ವಿಚಾರವೆಂದರೆ ಭಾರತದ ಒಕ್ಕಲಿಗರು ಸಾವಿರಾರು ವರ್ಷಗಳಿಂದ ಬೆವರಿನ ಬದುಕು ಸಾಗಿಸುತ್ತಾ ದೇಶಕ್ಕೆ ಅನನ್ಯವಾದ ಕೊಡುಗೆಯನ್ನು ನೀಡಿದ್ದರೂ, ನೀಡುತ್ತಾ ಬಂದಿದ್ದರೂ ಅವರಲ್ಲಿ ಒಗ್ಗಟ್ಟು ಮೂಡಿಲ್ಲ. ಆ ಒಗ್ಗಟ್ಟಿನ ಮೂಲಕ ರಾಜಕೀಯ ಇಚ್ಛಾಶಕ್ತಿಯನ್ನು ಅಭಿವ್ಯಕ್ತ ಮಾಡಲಾಗಿಲ್ಲ. ಕಾರಣವೆಂದರೆ ಒಕ್ಕಲಿಗರು ವ್ಯಾಪಾರಿಗಳಲ್ಲ, ಅಲೆಮಾರಿಗಳಲ್ಲ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರಯಾಣ ಮಾಡಿದವರಲ್ಲ. ಅವರು ಭೂಮಿಯನ್ನು ನಂಬಿದವರು, ಭೂಮಿ ತಾಯಿಯ ಚೊಚ್ಚಲ ಮಕ್ಕಳು. ಪ್ರಕೃತಿ ಮಾತೆಯನ್ನು ಮಳೆರಾಯನನ್ನು ನೆಚ್ಚಿದವರು. ಪಾರಂಪರಿಕವಾದ ಬೇಸಾಯದ ವೃತ್ತಿಗೆ, ಒಂದು ಹಳ್ಳಿಗೆ, ಆ ಹಳ್ಳಿಯ ಪರಿಸರಕ್ಕೆ ಅಂಟಿಕೊಂಡವರು. ಸ್ಥಿರವಾಗಿ ನಿಂತವರು. ನಿರಂತರವಾದ ಶ್ರಮದ ದುಡಿಮೆ ಮಾಡಿದವರು. ಸಮಯದ ಅಭಾವ, ಸಾರಿಗೆ ಸಂಪರ್ಕದ ಕೊರತೆ, ಅನಕ್ಷರತೆ, ಸಂಪರ್ಕ ಭಾಷೆಯ ಕೊರತೆಯಿಂದ ದೂರಪ್ರಾಂತ್ಯದ ಮತ್ತೊಬ್ಬ ಒಕ್ಕಲಿಗನನ್ನು ಸಂಪರ್ಕಿಸಲು, ಸಂಬಂಧ ಬೆಳೆಸಲು ಸಾಧ್ಯವಾಗಿಲ್ಲ. ಹೀಗಾಗಿ ಭಾರತದ ಒಕ್ಕಲಿಗ ಪ್ರಭೇದಗಳು ಅಲ್ಲಲ್ಲಿ ಚದುರಿದಂತೆ ದ್ವೀಪಗಳಂತೆ ವಾಸಿಸುತ್ತಿವೆ. ಕರ್ನಾಟಕದ ಒಕ್ಕಲಿಗರ ಪರಿಸ್ಥಿತಿಯೂ ಇದಕ್ಕಿಂತ ಭಿನ್ನವಾಗಿ ಏನು ಇಲ್ಲ.

ಕರ್ನಾಟಕದಲ್ಲಿ 'ಒಕ್ಕಲಿಗ' ಎಂಬುದು ಒಂದು ವ್ಯವಸ್ಥಿತ ಜಾತಿ. ಪ್ರಬಲ ಸಮುದಾಯ. ಇದು ವಾಸ್ತವ. ಮತ್ತೂ ವಾಸ್ತವ ಎಂದರೆ ಅದರೊಳಗೆ ಒಂದು ನೂರಕ್ಕಿಂತಲೂ ಹೆಚ್ಚಿನ ಬುಡಕಟ್ಟುಗಳಿವೆ. ನಾಡಿನ ಸಮಸ್ತ ಜನರಿಗೆ ಅನ್ನ, ವಸ್ತ್ರ, ವಸತಿ, ಉದ್ಯೋಗ, ಭದ್ರತೆ, ನೆಮ್ಮದಿ ನೀಡುವ ಪ್ರಧಾನ ವೃತ್ತಿಯಾದ ಈ ಒಕ್ಕಲುತನವನ್ನು ನೂರಾರು ಬುಡಕಟ್ಟುಗಳು ಅವಲಂಬಿಸಿ ಒಕ್ಕಲಿಗ ಜಾತಿ ಮತ್ತು ಒಳಪ್ರಭೇದಗಳ ಸೃಷ್ಟಿಗೆ ಕಾರಣವಾಗಿವೆ. ಆದರೆ ವ್ಯಾಪಕವಾದ ಅಧ್ಯಯನ ಮತ್ತು ಕ್ಷೇತ್ರಕಾರ್ಯದ ಕೊರತೆಯಿಂದಾಗಿ ಈ ಪ್ರಭೇದಗಳ ನಿಖರವಾದ ಸಂಖ್ಯೆ, ಜನಸಂಖ್ಯೆ, ಸ್ಥಿತಿಗತಿ, ಜೀವನ ಮಟ್ಟವನ್ನು ತಿಳಿಯಲಾಗಿಲ್ಲ.

ಆಳುವ ಸರ್ಕಾರಗಳಿಂದ ಅಧಿಕೃತ ಜಾತಿ ಜನಗಣತಿ ಆರಂಭವಾಗಿ ಒಕ್ಕಲಿಗ ಎಂದು ದಾಖಲೀಕರಣವಾಗುವುದಕ್ಕೆ ಮೊದಲೇ ಒಂದಷ್ಟು ಪ್ರಭೇದಗಳ ಒಕ್ಕಲಿಗರು ಭಾಗಶಃ ಇಲ್ಲವೆ ಪೂರ್ಣವಾಗಿ ಅನ್ಯ ಮತ ಧರ್ಮ ಸಂಪ್ರದಾಯಗಳಿಗೆ ದೀಕ್ಷೆಯ ಮೂಲಕ ವಲಸೆ ಹೋಗಿರುವುದ ರಿಂದ ಸ್ಥಿತ್ಯಂತರಗಳ ನಿಖರ ಅಧ್ಯಯನ ಸಾಧ್ಯವಾಗಿಲ್ಲ.

ಪ್ರಸ್ತುತ ಸಂದರ್ಭದಲ್ಲಿ ಕರ್ನಾಟಕದಲ್ಲಿ ಕಾಣಸಿಗುತ್ತಿರುವ ಒಕ್ಕಲಿಗ ಪ್ರಭೇದಗಳು ಹೀಗಿವೆ.

ಕ್ರಿಸ್ತಶಕ 1800 ರ ಸುಮಾರಿನಲ್ಲಿ ರಚನೆಯಾಗಿರುವ ದೇವಚಂದ್ರನ 'ರಾಜಾವಳಿ ಕಥಾಸಾರ' ಗ್ರಂಥದಲ್ಲಿ ಸಾದ, ಗುಡಿ, ರೆಡ್ಡಿ, ನೊಣಬ, ಗಂಗಡಿಕಾರ, ಕುಂಚಿಗ, ದಾಸ, ತೆಲಗ ಎಂಬ ಎಂಟು ಒಕ್ಕಲಿಗ ಪ್ರಭೇದಗಳು ಹೆಸರಿಲ್ಪಟ್ಟಿವೆ. ಈ ಎಂಟರಲ್ಲಿ ಗುಡಿ ಒಕ್ಕಲಿಗರು ಯಾರು? ಎಲ್ಲಿ ನೆಲೆಸಿದ್ದಾರೆ? ಅವರ ಸ್ಥಿತಿಗತಿ ಜೀವನ ಕ್ರಮಗಳೇನು? ಎಂಬುದು ತಿಳಿಯಲಾಗಿಲ್ಲ.

ಹೆಚ್.ವಿ. ನಂಜುಂಡಯ್ಯ ಮತ್ತು ಎಲ್ ಅನಂತಕೃಷ್ಣ ಅಯ್ಯರ್ ಅವರುಗಳು ತಮ್ಮ 'ದಿ ಮೈಸೂರ್ ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್' ಗ್ರಂಥದಲ್ಲಿ 'Vokkaliga is a generic term applied to a number of casts whose occupation in Agriculture' ಎಂದು ಹೇಳಿ ರೆಡ್ಡಿ ಒಕ್ಕಲಿಗರು, ಮೊರಸು ಒಕ್ಕಲಿಗರು, ಗಂಗಡಿಕಾರ ಒಕ್ಕಲಿಗರು, ನಾಮಧಾರಿ ಒಕ್ಕಲಿಗರು, ಕುಂಚಿಟಿಗ ಒಕ್ಕಲಿಗರು, ಹಳ್ಳಿಕಾರ ಒಕ್ಕಲಿಗರು, ಸಾದ ಒಕ್ಕಲಿಗರು, ಹಾಲು ಒಕ್ಕಲಿಗರು ಎಂಬ ಎಂಟು ಪ್ರಭೇದಗಳನ್ನು ಹೆಸರಿಸಿದ್ದಾರೆ.

ಕರ್ನಾಟಕದ ಶಾಸನ ಸಂಗ್ರಹ ಮತ್ತು ಅಧ್ಯಯನದಲ್ಲಿ ಬಹಳ ದೊಡ್ಡ ಸಾಧನೆ ಮಾಡಿರುವ ಡಾ ಬಿ ಎಲ್ ರೈಸ್ ಅವರು ಒಕ್ಕಲಿಗರಲ್ಲಿ ಐವತ್ನಾಲ್ಕು ಪ್ರಭೇದಗಳನ್ನು ಗುರುತಿಸಿದ್ದಾರೆ.

1931 ರಲ್ಲಿ ಜನಗಣತಿ ನಡೆದಾಗ ಒಕ್ಕಲಿಗರಲ್ಲಿ ಮೂವತ್ತೆಂಟು ಪ್ರಭೇದಗಳಿದ್ದವು ಎಂಬುದಾಗಿ ಮೈಸೂರಿನ ರಾವ್‌ಬಹದ್ದೂರ್ ಡಿ ಬನುಮಯ್ಯನವರು ಒಂದು ಕಡೆ ತಿಳಿಸಿದ್ದಾರೆ.[3]

2011 ರಲ್ಲಿ ನಾನೇ ರಚಿಸಿರುವ 'ಮೊರಸು ಒಕ್ಕಲಿಗರು-ಒಂದು ಸಾಂಸ್ಕೃತಿಕ ಅಧ್ಯಯನ' ಕೃತಿಯಲ್ಲಿ ಲಭ್ಯ ಮಾಹಿತಿಗಳ ಆಧರಿಸಿ ಮೂವತ್ತೆರಡು ಪ್ರಭೇದಗಳನ್ನು ಪಟ್ಟಿಮಾಡಿದ್ದೇನೆ.[4] ಈ ಪಟ್ಟಿಯನ್ನು ತಯಾರಿಸಲು ನನಗೆ ನನ್ನ ಈ ಕೃತಿಯ ಪ್ರಕಾಶಕರಾದ ಗೋಧೂಳಿ ಪ್ರಕಾಶನದ ಹೆಚ್.ಎಂ. ಬೋರಯ್ಯನವರು ಸಹಕರಿಸಿದ್ದಾರೆ. ಆ ಪಟ್ಟಿ ಹೀಗಿದೆ. ಗಂಗಡಿಕಾರ ಒಕ್ಕಲಿಗರು, ಕುಂಚಿಟಿ ಒಕ್ಕಲಿಗರು, ಮೊರಸು ಒಕ್ಕಲಿಗರು, ಮುಸುಕು ಒಕ್ಕಲಿಗರು, ಬಲ್ಲಾಳ ಒಕ್ಕಲಿಗರು, ಉಪ್ಪಿನ ಕೊಳಗ ಒಕ್ಕಲಿಗರು, ಸರ್ಪ ಒಕ್ಕಲಿಗರು, ಬಂಟ ಒಕ್ಕಲಿಗರು, ಹಳ್ಳಿಕಾರ ಒಕ್ಕಲಿಗರು, ನೊಣಬ ಒಕ್ಕಲಿಗರು, ರೆಡ್ಡಿ ಒಕ್ಕಲಿಗರು, ಚೋಳ ಒಕ್ಕಲಿಗರು, ದಾಸ ಒಕ್ಕಲಿಗರು, ನಾಡವ ಒಕ್ಕಲಿಗರು, ಪರಿವಾರದ ಒಕ್ಕಲಿಗರು, ಗಾಮ ಒಕ್ಕಲಿಗರು, ಹಾಲಕ್ಕಿ ಒಕ್ಕಲಿಗರು, ಕರೆ ಒಕ್ಕಲಿಗರು, ಕೊಟ್ಟೆ ಒಕ್ಕಲಿಗರು, ಶೀಲ ಒಕ್ಕಲಿಗರು, ಕುಡು ಒಕ್ಕಲಿಗರು, ಗೊಂಡ ಒಕ್ಕಲಿಗರು, ಅಟ್ಟೆ ಒಕ್ಕಲಿಗರು, ಮುಳ್ಳು

ಒಕ್ಕಲಿಗರು, ರೊದ್ದಗಾರ ಒಕ್ಕಲಿಗರು, ಸಾದ ಒಕ್ಕಲಿಗರು, ಸಪ್ಪೆ ಒಕ್ಕಲಿಗರು, ಕೊಡಗಿನ ಅರೆಭಾಷಿಕ ಒಕ್ಕಲಿಗರು, ದಕ್ಷಿಣ ಕನ್ನಡದ ಗೌಡ ಒಕ್ಕಲಿಗರು, ಬಡಗನಾಡ ಒಕ್ಕಲಿಗರು, ಮಲೆನಾಡಿನ ಶೈವ ಒಕ್ಕಲಿಗರು ಮತ್ತು ಮಲೆನಾಡಿನ ನಾಮಧಾರಿ ಒಕ್ಕಲಿಗರು.

ಮೇಲಿನ ಮೂವತ್ತೆರಡು ಪ್ರಭೇದಗಳ ಜೊತೆಗೆ ಸಜ್ಜನ ಒಕ್ಕಲಿಗರು, ಸಮುದ್ರಕುಲದ ಒಕ್ಕಲಿಗರು, ಕುಡಿ ಒಕ್ಕಲಿಗರು, ಕೊಡತಿ ಒಕ್ಕಲಿಗರು, ಲಾಳಗೊಂಡ ಒಕ್ಕಲಿಗರು, ಪಂಚಮಸಾಲಿ ಒಕ್ಕಲಿಗರು ಇರುವುದು ತಿಳಿದು ಬಂದಿದೆ. ಅಲ್ಲದೆ ಇನ್ನು ಬುಡಕಟ್ಟು ಹಂತದಲ್ಲಿಯೇ ಇರುವ ಸೋಲಿಗರು ವ್ಯವಸಾಯವನ್ನು ಕುಲಕಸುಬನ್ನಾಗಿಸಿಕೊಂಡಿರುವುದರಿಂದ ಅವರನ್ನು ಒಕ್ಕಲಿಗ ಪ್ರಭೇದಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡಬಹುದಾಗಿದೆ. ಸುಮಾರು 300 ಅಥವಾ 400 ವರ್ಷಗಳ ಹಿಂದೆ ಇಂದಿನ ಸೋಲಿಗ, ಹಾಲಕ್ಕಿ, ಗಾಮ ಬುಡಕಟ್ಟುಗಳಂತೆ ಎಲ್ಲಾ ಒಕ್ಕಲಿಗ ಪ್ರಭೇದಗಳು ಬುಡಕಟ್ಟು ಸ್ವರೂಪದಲ್ಲಿಯೇ ಇದ್ದವು ಎಂಬುದನ್ನು ಮರೆಯಲಾಗದು.

ಇವುಗಳ ಜೊತೆಗೆ ಇನ್ನೂ ಹಲವು ಒಕ್ಕಲಿಗ ಬುಡಕಟ್ಟುಗಳಿವೆ. ಇವುಗಳನ್ನು ಎಲ್ಲಿಂದ ತೆಗೆದುಕೊಂಡೆ ಎಂಬುದು ಗೊತ್ತಿಲ್ಲ, ಮರೆತುಹೋಗಿದೆ. ಆದರೆ ನಾನೇ ರಚಿಸಿರುವ 'ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ' ಗ್ರಂಥದಲ್ಲಿ ಅವುಗಳನ್ನು ಪ್ರಸ್ತಾಪಿಸಿದ್ದೇನೆ.[5] ಅವುಗಳೆಂದರೆ ತುಳುವ, ಕೋಪಿ, ಮೊತಾಬಿ, ಚೋತ್ರ, ಅರವೇದಿಗ, ಅಜಮಾರ, ಮಾಣಿಗ, ಅಂಗಲೀಗ, ಕುಳಿಬೆಡಗ, ಪಾಂಡರು, ಬೊಗ್ಗರು, ಬಂಡೇರು, ಕುಶಲಿ, ರಾಜಪುರಿ, ಹನುಮ, ಸಿಂಗದವರು, ಏಳುಮನೆ, ತಂಡಗೌಡ, ಮಡ್ಡಮೇಘದ, ಹೊಲಕಾಲ, ದಾಸವಂಟಿಗ, ಅಲಮಟ್ಟ, ಗಂಪಲಕಮ್ಮೇರು, ಕಂಬದಳ್ಳಿ, ಸಂಕರಜಾತಿ, ಸಣ್ಣಕೋಡು, ಗಂಗೀ, ಹಳೆಒಕ್ಕಲು, ಕಾಮಒಕ್ಕಲು, ಆರ್ಮುರ್ಣಂಡಿ, ತೋಟಗಾರ, ಗೋನಾಬು, ಹೊನ್ನೆ, ಕುಂಬಿ, ಬೆಳಕವಾಡಿ, ತುಳ್ಳೇರು, ದೊಡ್ಡಗಾಂಟ, ಕಪವಳ್ಳಿ, ಸೆಟ್ಟಿಗಾರ, ಬಂಡೇರು, ಮೊಡಾಟು, ಬೆಳ್ಳಿ, ಮಡ್ಡರು, ಮೊಗ್ಗದರು, ಮಾಳವರು ಮತ್ತು ಪಣಿಯರು. ಈ ಒಕ್ಕಲಿಗ ಪ್ರಭೇದಗಳ ವಾಸದ ನೆಲೆ, ಜನಸಂಖ್ಯೆ, ಪರಂಪರೆ, ಪ್ರಸ್ತುತ ಸ್ಥಿತಿಗತಿ, ಸ್ಥಿತ್ಯಂತರಗಳ ಯಾವುದೇ ಮಾಹಿತಿ ಲಭ್ಯವಾಗುವುದಿಲ್ಲ. ಬಹುಶಃ ತುಂಬ ಕಡಿಮೆ ಸಂಖ್ಯೆಯಲ್ಲಿರುವುದರಿಂದ ಒಕ್ಕಲಿಗ ಸಮುದಾಯದಲ್ಲಿ ಎದ್ದುಕಾಣುವುದಿಲ್ಲ. ಜೊತೆಗೆ ಈ ಪ್ರಭೇದಗಳು ನಿಜವಾಗಿ ಒಕ್ಕಲಿಗ ಸಮುದಾಯಕ್ಕೆ ಸೇರಿವೆಯೋ ಇಲ್ಲವೋ ಎಂಬುದು ತೀರ್ಮಾನವಾಗ ಬೇಕಿದೆ. ಇವುಗಳ ಬಗ್ಗೆ ಕ್ಷೇತ್ರಕಾರ್ಯಗಳಾಗಲಿ, ಅಧ್ಯಯನಗಳಾಗಲಿ ನಡೆದಿಲ್ಲ. ಇನ್ನು ಮುಂದಾದರು ವಿದ್ವಾಂಸರು ಈ ಪ್ರಭೇದಗಳ ಅಧ್ಯಯನಕ್ಕೆ ಗಮನ ನೀಡುವುದು ಅಗತ್ಯವಾಗಿದೆ.

ಆಂಧ್ರದಿಂದ ವಲಸೆಬಂದು ಕರ್ನಾಟಕದಲ್ಲಿ ಪ್ರಧಾನವಾಗಿ ನೆಲೆಸಿರುವ ತೆಲುಗು ಒಕ್ಕಲಿಗರನ್ನು 'ರೆಡ್ಡಿ ಒಕ್ಕಲಿಗರು' ಎಂದು ಮೂವತ್ತೆರಡು ಪ್ರಭೇದಗಳ ಪಟ್ಟಿಯಲ್ಲಿ ಸೇರಿಸಿದ್ದೇನೆ. ವಾಸ್ತವವಾಗಿ ಈ ತೆಲುಗು ಒಕ್ಕಲಿಗರಾದ ರೆಡ್ಡಿಗಳಲ್ಲಿ ಹತ್ತಾರು ಪ್ರಭೇದಗಳಿವೆ. ಇವರಲ್ಲಿ ವಿಶೇಷವಾಗಿ ಹೇಮರೆಡ್ಡಿ ಒಕ್ಕಲಿಗರು, ವೇಮರೆಡ್ಡಿ ಒಕ್ಕಲಿಗರು, ಪೋಕನಾಟಿ ಒಕ್ಕಲಿಗರು, ನೇರಕಿಂಟೆ ಒಕ್ಕಲಿಗರು, ಪೆಡಕಂಟಿ ಒಕ್ಕಲಿಗರು, ನೇರಾಟಿ ಒಕ್ಕಲಿಗರು, ವೇಲಮ ಒಕ್ಕಲಿಗರು, ಮಲ್ಲಿಕಂಟಿ ಒಕ್ಕಲಿಗರು, ಏಲುನಾಟಿ ಒಕ್ಕಲಿಗರು, ಮೇಲ್ನಾಟಿ ಒಕ್ಕಲಿಗರು, ನರವಲ ಒಕ್ಕಲಿಗರು ಮೊದಲಾದವರು ಕರ್ನಾಟಕವನ್ನು ತಮ್ಮ ವಾಸದ ನೆಲೆಯಾಗಿಸಿಕೊಂಡಿದ್ದಾರೆ.

ತೆಲುಗು ಒಕ್ಕಲಿಗರಂತೆ ಇತರೆ ಕನ್ನಡೇತರ ಭಾಷಿಕ ಒಕ್ಕಲಿಗರು ಕರ್ನಾಟಕ ದೊಳಗೆ ವಲಸೆ ಬಂದಿದ್ದಾರೆ, ಇಲ್ಲವೆ ಗಡಿಭಾಗದಲ್ಲಿ ನೆಲೆಸಿದ್ದಾರೆ. ಅವರುಗಳೆಂದರೆ ತಮಿಳು ಮೂಲದ ಗೌಂಡರ್‌ಗಳು, ಮಲೆಯಾಳಿ ಮೂಲದ ನಯ್ಯರ್‌ಗಳು ಮತ್ತು ಮರಾಠಿ ಮೂಲದ ಮರಾಠರು. ಮರಾಠಿ ಮಾತನಾಡುವವರೆಲ್ಲರೂ ಮರಾಠರೇ ಆದರೂ ಕೃಷಿ ಮೂಲದ ಒಕ್ಕಲಿಗರನ್ನು 'ಮರಾಠ' ಎಂಬ ಜಾತಿ ಹೆಸರಿನಿಂದ ಗುರುತಿಸಲಾಗುತ್ತದೆ.

ಇನ್ನು ವ್ಯಾಪಾರ ಉದ್ಯೋಗಗಳ ನಿಮಿತ್ತ ಉತ್ತರ ಭಾರತದಿಂದ ಬಂದು ಕರ್ನಾಟಕದಲ್ಲಿ ನೆಲೆಸಿರುವ ಪಟೇಲ್, ಗುಜ್ಜಾರ್, ರಜಪೂತ್, ಜಾಟ್, ಠಾಕೂರ್ ಮೊದಲಾದವರು ಮೂಲತಃ ಕೃಷಿಕರೇ ಆಗಿದ್ದಾರೆ. ಇವರಲ್ಲಿಯೂ ಹತ್ತಾರು ಪ್ರಭೇದಗಳು ಇವೆ.

ಇಲ್ಲಿ ಅನೇಕ ವಿಪರ್ಯಾಸಗಳಿವೆ, ಆಶ್ಚರ್ಯದ ಸಂಗತಿಗಳಿವೆ. ಅವುಗಳಲ್ಲೊಂದು ಎಂದರೆ ನೂರಕ್ಕೆ ನೂರರಷ್ಟು ಕೃಷಿಕರೇ ಆಗಿರುವ, ಅದನ್ನೇ ಕುಲಕಸುಬು ಮಾಡಿಕೊಂಡು ಪರಂಪರೆಯಿಂದ ಸಾಗಿಬಂದಿರುವ ತಿಗಳರು ಒಕ್ಕಲಿಗ ಜಾತಿಯಲ್ಲಿ ಪಟ್ಟಿಯಲ್ಲಿ ಸೇರ್ಪಡೆಯಾಗಿಲ್ಲ. ಕ್ಷತ್ರಿಯರು ಎಂದು ತಮ್ಮನ್ನು ತಾವು ಕರೆದುಕೊಳ್ಳುವ ಧರ್ಮರಾಯನ ಒಕ್ಕಲಾದ ಇವರನ್ನು ಕೆಲವು ಕಡೆ ವಿಶೇಷವಾಗಿ ಚಿಕ್ಕಬಳ್ಳಾಪುರ-ಕೋಲಾರ ಭಾಗದಲ್ಲಿ ತಿಗಳೊಕ್ಕಲಿಗರು ಎಂದು ಕರೆಯುತ್ತಾರೆ. ಈ ಬಗ್ಗೆ ಒಂದಷ್ಟು ಚರ್ಚೆ ಮತ್ತು ತೀರ್ಮಾನಗಳಾಗಬೇಕಾಗಿದೆ.

ಹೀಗೆ ಮುಂದುವರೆಯುವ ಒಕ್ಕಲಿಗ ಪ್ರಭೇದಗಳನ್ನು ಹಲವು ಸ್ವರೂಪಗಳಲ್ಲಿ ವಿಂಗಡಿಸಬಹುದು, ಅಧ್ಯಯನ ಮಾಡಬಹುದು. ಆಡುವ ಭಾಷೆಯ ನೆಲೆಯಲ್ಲಿ ಕನ್ನಡ ಒಕ್ಕಲಿಗರು ಮತ್ತು ಕನ್ನಡೇತರ ಒಕ್ಕಲಿಗರು ಎಂದೂ, ಬಳಸುವ ಆಹಾರದ ಆಧಾರದ ಮೇಲೆ ಶಾಖಾಹಾರಿ ಒಕ್ಕಲಿಗರು ಮತ್ತು ಮಾಂಸಾಹಾರಿ ಒಕ್ಕಲಿಗರು ಎಂದೂ, ಧರ್ಮದ ಆಧಾರದ ಮೇಲೆ ಮೂಲ ಒಕ್ಕಲಿಗರು ಮತ್ತು ಮತಾಂತರಗೊಂಡ ಒಕ್ಕಲಿಗರು ಎಂದೂ, ಅಭಿವೃದ್ಧಿಯ ಹಿನ್ನೆಲೆಯಲ್ಲಿ ಮುಂದುವರೆದ ಒಕ್ಕಲಿಗರು ಮತ್ತು ಹಿಂದುಳಿದ ಒಕ್ಕಲಿಗರು ಎಂದೂ ವಿಭಾಗಿಸಬಹುದು. ಅಲ್ಲದೆ ಪ್ರಾದೇಶಿಕವಾಗಿ ಮೈಸೂರು ಸೀಮೆಯ ಒಕ್ಕಲಿಗರು, ಮಲೆನಾಡ ಒಕ್ಕಲಿಗರು, ಕರಾವಳಿ ಭಾಗದ ಒಕ್ಕಲಿಗರು, ಮಧ್ಯ ಕರ್ನಾಟಕದ ಒಕ್ಕಲಿಗರು, ಕಿತ್ತೂರು ಕರ್ನಾಟಕದ ಒಕ್ಕಲಿಗರು ಮತ್ತು ಕಲ್ಯಾಣ ಕರ್ನಾಟಕದ ಒಕ್ಕಲಿಗರು ಎಂದು ವಿಂಗಡಿಸಬಹುದು.

ಇದೆಲ್ಲ ಚರ್ಚೆ, ವಿಂಗಡಣೆ ಏನೇ ಇರಲಿ, ಪ್ರಸ್ತುತ ಕಾಲಘಟ್ಟದಲ್ಲಿ ಕೃಷಿಯನ್ನು ಕುಲಕಸುಬನ್ನಾಗಿಸಿಕೊಂಡು ಪರಂಪರೆಯಿಂದ ಸಾಗಿಬಂದಿರುವ ಎಲ್ಲಾ ಒಕ್ಕಲಿಗ ಪ್ರಭೇದಗಳು ಏಕರೀತಿಯಲ್ಲಿ ಬೆಳವಣಿಗೆಯಾಗಿಲ್ಲ, ಅಭಿವೃದ್ಧಿಯಾಗಿಲ್ಲ. ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮುಂದುವರೆದಿಲ್ಲ. ಇದನ್ನೇ ಮಾನದಂಡವನ್ನಾಗಿ ಮಾಡಿಕೊಂಡು ಕರ್ನಾಟಕದ ಒಕ್ಕಲಿಗರಲ್ಲಿ ಮೂರು ಸ್ತರಗಳನ್ನು ಗುರುತಿಸಬಹುದಾಗಿದೆ.[1] ಅವುಗಳೆಂದರೆ,

ಮೊದಲನೆಯದು-ತುಂಬ ಹಿಂದುಳಿದ ಪ್ರಾಚೀನ ಬುಡಕಟ್ಟು ಸ್ವರೂಪ ದಲ್ಲಿಯೇ ಇರುವ ಒಕ್ಕಲಿಗರು.

ಎರಡನೆಯದು-ಬುಡಕಟ್ಟು ಸ್ವರೂಪದಿಂದ ಮೇಲೆ ಬಂದು ವ್ಯವಸ್ಥಿತವಾಗಿ ಸಂಘಟಿತರಾಗಿರುವ ನಡುಕಟ್ಟು ಸ್ತರದ ಒಕ್ಕಲಿಗರು.

ಮೂರನೆಯದು-ವ್ಯವಸ್ಥಿತವಾಗಿ ಸಂಘಟಿತರಾಗಿದ್ದು ದೀಕ್ಷೆಯ ಮೂಲಕ ಅನ್ಯ ಮತಧರ್ಮಗಳಿಗೆ ವಲಸೆಹೋದ ಅಂದರೆ ಮತಾಂತರವಾದ, ತಲೆಕಟ್ಟು ಸ್ತರದ ಒಕ್ಕಲಿಗರು.

ಮೊದಲ ಸ್ತರದ ಒಕ್ಕಲಿಗರು ಎಂಟತ್ತು ಸಾವಿರ ವರ್ಷಗಳಿಂದ ಈ ನೆಲದಲ್ಲಿ ನೆಲೆಸಿದ್ದರೂ ಇಂದಿಗೂ ಬುಡಕಟ್ಟು ಸ್ಥಿತಿಯಲ್ಲಿಯೇ ಬದುಕುತ್ತಿದ್ದಾರೆ. ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ತೀರ ಹಿಂದುಳಿದಿದ್ದಾರೆ. ಕಾಡಿನಲ್ಲಿ, ಕಾಡಿನಂಚಿನಲ್ಲಿ ಅಲೆಮಾರಿಗಳಂತೆ ಜೀವಿಸುತ್ತಿದ್ದಾರೆ. ಆದರೆ ಇವರು ಸಂಸ್ಕೃತಿಯಲ್ಲಿ ಸಂಪನ್ನರು, ಸಾಂಸ್ಕೃತಿಕವಾಗಿ ಶ್ರೀಮಂತರು. ಕರಾವಳಿ ಮತ್ತು ಘಟ್ಟಪ್ರದೇಶದ ಹಾಲಕ್ಕಿ ಒಕ್ಕಲಿಗರು, ಕರೆ ಒಕ್ಕಲಿಗರು, ಕೊಟ್ಟೆ ಒಕ್ಕಲಿಗರು, ಗಾಮ ಒಕ್ಕಲಿಗರು, ಗೊಂಡ ಒಕ್ಕಲಿಗರು, ಸೋಲಿಗ ಒಕ್ಕಲಿಗರು ಈ ಸ್ತರಕ್ಕೆ ಸೇರುತ್ತಾರೆ. ಇವರುಗಳಿಗೆ ಯಾವುದೇ ಶಿಷ್ಟ ಧರ್ಮಗಳ ದೀಕ್ಷೆ ಇಲ್ಲ. ಗುರುವಿಲ್ಲ, ಗುರುಪೀಠವಿಲ್ಲ, ಲಾಂಛನಗಳಿಲ್ಲ. ಆದರೆ ತಮ್ಮವೇ ಆದ ಬುಡಕಟ್ಟು ದೇವರುಗಳನ್ನು ನಿಸರ್ಗ ದೇವರುಗಳನ್ನು ಪೂಜಿಸುತ್ತಾರೆ, ಆರಾಧಿಸುತ್ತಾರೆ. ವಿಶಿಷ್ಟವಾದ ಆಚಾರ ವಿಚಾರಗಳನ್ನು, ಸಂಪ್ರದಾಯಗಳನ್ನು ಪಾಲಿಸುತ್ತಾರೆ.

ಎರಡನೇ ಸ್ತರದ ಒಕ್ಕಲಿಗರು, ಬುಡಕಟ್ಟು ಸ್ತರದಿಂದ ಮೇಲೆ ಬಂದು ನಡುಕಟ್ಟಿನ ಹಂತದಲ್ಲಿ ವ್ಯವಸ್ಥಿತವಾದ ಸಾಮಾಜಿಕ ಜೀವನ ನಡೆಸುತ್ತಿದ್ದಾರೆ. ರಾಜಕೀಯವಾಗಿ ಆರ್ಥಿಕವಾಗಿ ಶೈಕ್ಷಣಿಕವಾಗಿ ಮುಂದುವರೆದಿದ್ದಾರೆ. ತಮ್ಮ ತಮ್ಮ ಪ್ರಭೇದಗಳ ಹಿರಿಮೆಗರಿಮೆ, ಪರಂಪರೆಯನ್ನು ಅರಿತು ಅಭಿಮಾನಪಡುತ್ತಾರೆ. ನಾಡು ನುಡಿ ಸಂಸ್ಕೃತಿಗೆ ಅಪಾರ ಕೊಡುಗೆಯನ್ನು ನೀಡಿದ್ದಾರೆ. ದಕ್ಷಿಣ ಬಯಲು ಸೀಮೆಯ ಗಂಗಡಿಕಾರ ಒಕ್ಕಲಿಗರು, ಮೊರಸು ಒಕ್ಕಲಿಗರು, ಮುಸುಕು ಒಕ್ಕಲಿಗರು, ಕುಂಚಿಟಿಗ ಒಕ್ಕಲಿಗರು, ಹಳ್ಳಿಕಾರ ಒಕ್ಕಲಿಗರು, ನೊಣಬ ಒಕ್ಕಲಿಗರು, ರೆಡ್ಡಿ ಒಕ್ಕಲಿಗರು ಮೊದಲಾದವರು ಈ ಸ್ತರಕ್ಕೆ ಸೇರುತ್ತಾರೆ. ಇವರಿಗೂ ಯಾವುದೇ ಶಿಷ್ಟ ಧರ್ಮಗಳ ದೀಕ್ಷೆಯಿಲ್ಲ, ಲಾಂಛನಗಳಿಲ್ಲ. ಆದರೆ ತಮ್ಮವೇ ಆದ ಬುಡಕಟ್ಟು ದೇವರುಗಳನ್ನು, ಗ್ರಾಮದೇವತೆಗಳನ್ನು ಜೊತೆಗೆ ಶೈವ ಶಾಕ್ತ ವೈದಿಕ ದೇವರುಗಳನ್ನು ಪೂಜಿಸುತ್ತಾರೆ. ಹಿಂದೂ ಧಾರ್ಮಿಕ ಆಚರಣೆಗಳನ್ನು ಅನುಕರಣೆ ಮಾಡುತ್ತಾರೆ. ಶ್ರೀಆದಿಚುಂಚನಗಿರಿಯ ನಾಥಪೀಠವನ್ನು ತಮ್ಮದೆಂದು ಭಾವಿಸುತ್ತಾರೆ. ಅಲ್ಲಿನ ಶ್ರೀಗಳನ್ನು ಗೌರವಿಸುತ್ತಾರೆ, ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಾರೆ.

ಎರಡನೇ ಸ್ತರದ ಒಕ್ಕಲಿಗರ ಹಂತದಿಂದ ವೈದಿಕ, ವೈಷ್ಣವ, ಶೈವ, ವೀರಶೈವ, ಬೌದ್ಧ, ಜೈನ, ಕ್ರೈಸ್ತ, ಮುಸ್ಲಿಂ ಮೊದಲಾದ ಶಿಷ್ಟ ಧರ್ಮಗಳ ಧಾರ್ಮಿಕ ವಲಯಕ್ಕೆ ದೀಕ್ಷೆಯ ಮೂಲಕ ವಲಸೆ ಹೋದವರೆ ಮೂರನೇ ಸ್ತರದ ಒಕ್ಕಲಿಗರು. ಇವರನ್ನು ಮತಾಂತರಗೊಂಡ ಒಕ್ಕಲಿಗರು ಎಂದು ಕರೆಯಬಹುದು. ಹೀಗೆ ಮತಾಂತರಗೊಂಡವರು ತಮ್ಮನ್ನು ತಾವು ಒಕ್ಕಲಿಗರು ಎಂದು ಹೇಳಿಕೊಳ್ಳದೆ ಅದನ್ನು ಮರೆಮಾಚಿ ವೈದಿಕರು, ಜೈನರು, ವೀರಶೈವರು, ವೈಷ್ಣವರು, ಮುಸ್ಲಿಮರು, ಕ್ರೈಸ್ತರು ಎಂದು ಹೇಳಿಕೊಳ್ಳುತ್ತಾರೆ. ಕರ್ನಾಟಕದಲ್ಲಿ ಶಿಷ್ಟ ಧರ್ಮಗಳ ವಲಯಕ್ಕೆ ಎಲ್ಲಾ ಕಸುಬುದಾರರು ಜಾತಿಬಾಂಧವರು ಪ್ರವೇಶಿಸಿದ್ದರೂ ಅವರಲ್ಲಿ ಸಂಖ್ಯಾಬಾಹುಳ್ಯದಿಂದಾಗಿ ಒಕ್ಕಲಿಗ ಮೂಲದವರೇ ಎದ್ದು

ಕಾಣುತ್ತಾರೆ. ಆರ್ಥಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಮತ್ತಿತರ ಕ್ಷೇತ್ರಗಳಲ್ಲಿ ಬಹುದೊ ಸಾಧನೆ ಮಾಡಿದ್ದಾರೆ. ಪೂರ್ಣಹಿಡಿತ ಹೊಂದಿದ್ದಾರೆ. ಒಕ್ಕಲಿಗ ಪ್ರಭೇದಗ ಪ್ರವೇಶದಿಂದಾಗಿಯೇ ಶಿಷ್ಟ ಧರ್ಮಗಳು ಪ್ರಬಲವಾಗಿ ಬೆಳೆದು ಬಂದಿರುವುದನ್ನು ಗಮನಿಸಬಹದು.

ಬಹುತೇಕ ಒಕ್ಕಲಿಗ ಪ್ರಭೇದಗಳು ಮುಖ್ಯವಾಗಿ ಎರಡು ಇಲ್ಲವೆ ಮೂ ಮತಧರ್ಮಗಳ ಪ್ರಭಾವಕ್ಕೆ ಒಳಗಾಗಿವೆ. ದೀಕ್ಷೆ ಮೂಲಕ ಒಳ ಪ್ರವೇಶಿಸಿವೆ. ಒಕ್ಕ ಎಂಬ ತಮ್ಮ ಮೂಲ ಜಾತಿಯ ವಿಸ್ಮೃತಿಗೆ ಒಳಗಾಗಿವೆ. ಹೊಸ ಧರ್ಮಗಳ ಹೆಸರುಗಳಿ ಕರೆಯಲ್ಪಡುತ್ತಿವೆ.[7] ಉದಾಹರಣೆಗೆ ಗಂಗಡಿಕಾರ ಒಕ್ಕಲಿಗರನ್ನು ಗಮನಿಸಬಹುದು.

ತಲಕಾಡು ಗಂಗರ ಕಾಲದಲ್ಲಿ ಗಂಗವಾಡಿಯಲ್ಲಿ ನೆಲೆಸಿದ್ದ, ಒಕ್ಕಲಿಗ ಪ್ರಭೇದಗಳ ಬಹು ದೊಡ್ಡದಾಗಿರುವ ಗಂಗಡಿಕಾರ ಒಕ್ಕಲಿಗರಲ್ಲಿ ಮುಖ್ಯವಾಗಿ ಪೆಟ್ಟಿಗೆಯವರು ಮ ಬುಜ್ಜಣಿಗೆಯವರು ಎಂಬ ಎರಡು ಉಪಪಂಗಡಗಳಿವೆ. ಇವರಲ್ಲಿ ಬೆಂಗಳೂರು-ಮಂಡ್ಯ ಮೈಸೂರು-ತುಮಕೂರು ಭಾಗದ ಪೆಟ್ಟಿಗೆಯವರು ವೈಷ್ಣವ ಸಂಪ್ರದಾಯದವರಾಗಿ ತಿರುಪತಿ ತಿಮ್ಮಪ್ಪನನ್ನು ಮುಖ್ಯವಾಗಿ ಆರಾಧಿಸುತ್ತಾರೆ. ಬುಜ್ಜಣಿಗೆಯವರು ಶೈವರಾಗಿ ಆದಿಚುಂಚನಗಿರಿ ಭೈರವನ ಒಕ್ಕಲಾಗಿದ್ದಾರೆ.

ವಿಶೇಷ ಎಂದರೆ ಇದೇ ಪೆಟ್ಟಿಗೆಯವರು ಹಾಸನ-ಚಿಕ್ಕಮಗಳೂರು ಭಾಗದ ದಾಸ ಒಕ್ಕಲಿಗರಾಗಿದ್ದಾರೆ. ಶಿವಮೊಗ್ಗ-ತೀರ್ಥಹಳ್ಳಿ ಭಾಗದಲ್ಲಿ ನಾಮಧಾರಿ ಒಕ್ಕಲಿ ರಾಗಿದ್ದಾರೆ. ಇದೇ ರೀತಿ ಬುಜ್ಜಣಿಗೆಯವರು ಹಾಸನ-ಚಿಕ್ಕಮಗಳೂರು ಭಾಗದಲ್ಲಿ ಮು ಒಕ್ಕಲಿಗರು ಎಂದೂ, ಶಿವಮೊಗ್ಗ-ತೀರ್ಥಹಳ್ಳಿ ಭಾಗದಲ್ಲಿ ಶೈವ ಒಕ್ಕಲಿಗರು ಎಂದ ಕರೆಯಲ್ಪಡುತ್ತಿದ್ದಾರೆ.

ಶೈವ ಒಕ್ಕಲಿಗರಿಗೆ ಮಲೆಗೌಡರು ಎಂಬ ಇನ್ನೊಂದು ಹೆಸರೂ ಇದೆ. ಎಲ್ಲರ ಮಾಂಸಾಹಾರಿಗಳಾಗಿದ್ದರೂ ಈ ಶೈವ ಒಕ್ಕಲಿಗರು ಮಾಂಸಾಹಾರ ತ್ಯಜಿಸಿ ಸಸ್ಯಾಹಾ ಗಳಾಗಿದ್ದಾರೆ. ಆಹಾರ ಭಿನ್ನತೆಯಿಂದಾಗಿ ಈ ಮಲೆನಾಡಿನ ಶೈವ ಒಕ್ಕಲಿಗರು ಹಂ ಹಂತವಾಗಿ ಇತರೆ ಒಕ್ಕಲಿಗರಿಂದ ದೂರವಾಗುತ್ತಿದ್ದಾರೆ, ಲಿಂಗಾಯತರಿಗೆ ಹತ್ತಿರವಾಗುತ್ತಿದ್ದಾ ಇದು ಇತ್ತೀಚಿನ ಬೆಳವಣಿಗೆ. ಇದನ್ನು ಗಮನಿಸಿದ ಅನೇಕ ಲಿಂಗಾಯತ ವಿದ್ವಾಂಸ ತಮ್ಮ ಬರಹ ಭಾಷಣಗಳಲ್ಲಿ ಇವರನ್ನು ಲಿಂಗಾಯತ ಸಮುದಾಯದ ಒಂದು ಭಾಗದಂ ಒಳಪಂಗಡದಂತೆ ಪ್ರತಿಪಾದನೆ ಮಾಡುತ್ತಿದ್ದಾರೆ.

ಗಂಗಡಿಕಾರರಲ್ಲಿ ಸ್ವಲ್ಪ ಜನ ಸುಮಾರು 1500 ವರ್ಷಗಳ ಹಿಂದೆ ತಮ್ಮನ ಆಳುತ್ತಿದ್ದ ತಮ್ಮ ಮೂಲದ ಗಂಗದೊರೆಗಳಂತೆ ದೀಕ್ಷೆ ಮೂಲಕ ಜೈನಧರ್ಮ ಸೇರ್ಪಡೆಯಾದರು. ಇದಾಗಿ ಎಷ್ಟೋ ವರ್ಷಗಳ ನಂತರ ಗಂಗಡಿಕಾರರಿಂದಲೇ ಸಿಡಿದ ಹೊರ ಬಂದು ಶುದ್ಧ ಶೈವರಾಗಿ ಶಾಖಾಹಾರಿಗಳಾದ ಇನ್ನೊಂದು ಗುಂಪು 'ಜೋ ಒಕ್ಕಲಿಗರು' ಎಂದು ಹೆಸರಾದರು. ಈ ಆಹಾರ ಭಿನ್ನತೆಯಿಂದಾಗಿ ಒಕ್ಕಲಿಗರಿಂದ ದೂರವಾ ವೀರಶೈವಕ್ಕೆ ಹತ್ತಿರವಾದ ಈ ಜೋಳ ಒಕ್ಕಲಿಗರು ಲಿಂಗದೀಕ್ಷೆಯ ಮೂಲ ಲಿಂಗಾಯತರಾದರು. ಶೇ.90 ರಷ್ಟು ಜನರು ಈ ಪ್ರಕ್ರಿಯೆಗೆ ಒಳಗಾಗಿದ್ದು ಉಳಿದ ಅ

ಸ್ವಲ್ಪ ಜನರು ಇತ್ತ ಒಕ್ಕಲಿಗರೂ ಆಗದೆ, ಅತ್ತ ಲಿಂಗಾಯತರೂ ಆಗದೆ ಅಲ್ಪಸಂಖ್ಯಾತರಾಗಿ ನಡುಮಧ್ಯೆ ಪರಿತಪಿಸುತ್ತಿದ್ದಾರೆ.

ಸುಮಾರು 200 ವರ್ಷಗಳ ಹಿಂದೆ ಅಂದರೆ ಕ್ರಿಸ್ತಶಕ 1800 ರ ಆಸುಪಾಸಿನಲ್ಲಿ ಗಂಗಡಿಕಾರ ಒಕ್ಕಲಿಗರು ಮತ್ತೊಮ್ಮೆ ವೀರಶೈವದ ಪ್ರಭಾವಕ್ಕೆ ಒಳಗಾದರು. ಈ ಹಂತದಲ್ಲಿ ಲಿಂಗದೀಕ್ಷೆ ಪಡೆದು ಲಿಂಗಾಯತರಾದವರು 'ಗೌಡ ಲಿಂಗಾಯತರು' ಎಂಬ ಹೆಸರು ಪಡೆದರು. ತಮಾಶೆಗಾಗಿ ಇವರನ್ನು ಇತರೆ ಲಿಂಗಾಯತರು ಕಂಬಿ ಪೇಟದವರು, ಗೌಡ ಮನೆಯವರು ಎಂದು ಕರೆಯುತ್ತಾರೆ. ಹೀಗೆ ಮತಾಂತರಗೊಂಡ ಗೌಡ ಲಿಂಗಾಯತರಲ್ಲಿಯೂ ಪೆಟ್ಟಿಗೆಯವರು ಮತ್ತು ಬುಜ್ಜಣಿಗೆಯವರು ಎಂಬ ವಿಂಗಡನೆ ಮುಂದುವರೆದಿದೆ. ತುಮಕೂರು-ಮಾಗಡಿ-ನೆಲಮಂಗಲ ಭಾಗದಲ್ಲಿ ಇವರು ದಟ್ಟವಾಗಿ ಇತರೆ ಕಡೆ ವಿರಳವಾಗಿ ಕಂಡುಬರುತ್ತಾರೆ, ತುಮಕೂರಿನ ಶ್ರೀಸಿದ್ಧಗಂಗಾ ಮಠ ಮತ್ತು ಅಲ್ಲಿನ ಶ್ರೀಶ್ರೀ ಶಿವಕುಮಾರ ಸ್ವಾಮಿಗಳು, ಸುತ್ತೂರು ಮಠ ಮತ್ತು ಅಲ್ಲಿನ ಶ್ರೀಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು ಈ ಮೂಲದವರು. ಯಡೆಯೂರು ಸಿದ್ಧಲಿಂಗೇಶ್ವರರು ಸಹ ಇದೇ ಒಕ್ಕಲಿಗ ಮೂಲದವರು ಎಂಬುದಾಗಿ ಕುಣಿಗಲ್ ತಾಲೂಕು ಶ್ರೀಅರೇಶಂಕರ ಮಠದ ಒಕ್ಕಲಿಗ ಜಗದ್ಗುರು ಶ್ರೀಸಿದ್ಧರಾಮಚೈತನ್ಯಮಹಾ ಸ್ವಾಮಿಗಳು ಪ್ರತಿಪಾದಿಸುತ್ತಲೇ ಬರುತ್ತಿದ್ದಾರೆ.[೪]

ಹಾಗೆಯೇ ಸಾದ ಒಕ್ಕಲಿಗ ಪ್ರಭೇದದಲ್ಲಿಯೂ ಬಹು ದೊಡ್ಡ ಮಟ್ಟದಲ್ಲಿ ಮತಾಂತರ ಪ್ರಕ್ರಿಯೆಗಳು ನಡೆದಿವೆ. ಮೂಲತಃ ಸಸ್ಯಾಹಾರಿಗಳಾದ ಸಾದರಲ್ಲಿ ಸ್ವಲ್ಪ ಜನರು ಮೊದಲಿಗೆ ಜೈನ ದೀಕ್ಷೆ ಪಡೆದರು, ಸಾದ ಜೈನರಾದರು. ನಂತರದಲ್ಲಿ ಬಹು ಜನರು ಲಿಂಗದೀಕ್ಷೆ ಪಡೆದು ಸಾದ ಲಿಂಗಾಯತರಾದರು. ಚಿತ್ರದುರ್ಗ-ದಾವಣಗೆರೆ-ಬಳ್ಳಾರಿ ಭಾಗದಲ್ಲಿ ಈ ಪ್ರಕ್ರಿಯೆ ವ್ಯಾಪಕವಾಗಿ ನಡೆದು ಎಲ್ಲಾ ಸಾದರು ಮತಾಂತರವಾಗಿ ಲಿಂಗಾಯತರಾಗಿದ್ದಾರೆ. ಮತ್ತು ಆ ಭಾಗದಲ್ಲಿ, ಎಲ್ಲಾ ಕ್ಷೇತ್ರಗಳಲ್ಲಿ ಬಲಿಷ್ಟರೂ ಆಗಿದ್ದಾರೆ. ಚಿತ್ರದುರ್ಗ ಜಿಲ್ಲೆಯ 'ಸಿರಿಗೆರೆ ಮಠ' ಈ ಸಾದ ಲಿಂಗಾಯತರ ಕೇಂದ್ರವಾಗಿದೆ. ಆದರೆ ಈ ಯಾವುದೆ ದೀಕ್ಷೆಗೆ ಒಳಗಾಗದೆ ಅಳಿದುಳಿದ ಸಾದರು ತುಂಬಾ ಮೈನಾರಿಟಿಗಳಾಗಿದ್ದು ತಮ್ಮನ್ನು ಒಕ್ಕಲಿಗರು ಎಂದು ಕರೆದುಕೊಳ್ಳದೆ 'ಹಿಂದೂ ಸಾದರು', 'ಸಾದ ಗೌಡರು' ಎಂದಷ್ಟೇ ಹೇಳುತ್ತಿದ್ದಾರೆ. ಜನಗಣತಿಯಲ್ಲಿ ಹಾಗೆಯೇ ಬರೆಸುತ್ತಿದ್ದಾರೆ. ಹೀಗಾಗಿ ಒಕ್ಕಲಿಗರ ಒಂದು ದೊಡ್ಡ ಪ್ರಭೇದವಾದ ಸಾದ ಒಕ್ಕಲಿಗರು ಇಂದು ಒಕ್ಕಲಿಗರಿಂದ ದೈಹಿಕವಾಗಿ ಮಾನಸಿಕವಾಗಿ ದೂರವಾಗಿದ್ದಾರೆ.

ಸಾದ ಒಕ್ಕಲಿಗರನ್ನು ಅನುಸರಿಸಿದವರು ಸಜ್ಜನ ಒಕ್ಕಲಿಗರು. ಇವರಲ್ಲಿಯೂ ಸ್ವಲ್ಪ ಜನ ಜೈನರಾಗಿದ್ದಾರೆ, ಸ್ವಲ್ಪ ಜನ ಲಿಂಗಾಯತರಾಗಿದ್ದಾರೆ. ಮೂಲ ಬುಡಕಟ್ಟಿನಿಂದ ದೂರವಾಗಿದ್ದಾರೆ. ಪುಣ್ಯಕ್ಕೆ ಈ ಎರಡೂ ದೀಕ್ಷೆಗಳನ್ನು ದಿಕ್ಕರಿಸಿದವರು, ಮತಾಂತರವಾಗದವರು ಒಕ್ಕಲಿಗರು, ಸಜ್ಜನ ಒಕ್ಕಲಿಗರು ಎಂದು ಕರೆದುಕೊಳ್ಳುತ್ತಿದ್ದಾರೆ. ಮೂಲ ಸಂಸ್ಕೃತಿಯ ಭಾಗವಾಗಿದ್ದಾರೆ.

ಇದೇ ರೀತಿ ಬಡಗನಾಡ ಒಕ್ಕಲಿಗರಲ್ಲಿಯೂ ಧಾರ್ಮಿಕ ಸ್ಥಿತ್ಯಂತರಗಳಾಗಿವೆ. ಲಿಂಗ ಕಟ್ಟಿ (ಲಿಂಗಾಯತ)- ಲಿಂಗ ಕಟ್ಟೇತರ್ (ಲಿಂಗಾಯತೇತರ) ಎಂಬ ಗುಂಪುಗಳಾಗಿವೆ.

ಪರಸ್ಪರ ವೈವಾಹಿಕ ಸಂಬಂಧಗಳು ನಿಂತುಹೋಗಿವೆ. ಒಂದಷ್ಟು ಜನ ಬಡಗ ಒಕ್ಕಲಿಗರು ಕ್ರೈಸ್ತ ಧರ್ಮಕ್ಕೆ ಮತಾಂತರವಾಗಿದ್ದಾರೆ.[9]

ಇನ್ನು ನೊಣಬ ಒಕ್ಕಲಿಗರು. ತುಮಕೂರಿನಿಂದ ಹಾಸನದವರೆಗೆ ದಟ್ಟವಾಗಿ ನೆಲೆಸಿರುವ ಈ ಪ್ರಭೇದದಲ್ಲಿ ಕ್ರಿಸ್ತಶಕ 1800 ನಂತರದಲ್ಲಿ ಶೇ.80 ರಷ್ಟು ಜನರು ಲಿಂಗದೀಕ್ಷೆ ಪಡೆದು ನೊಣಬ ಲಿಂಗಾಯತರಾದರು. ನೊಣಬ ಬುಡಕಟ್ಟಿನ ಸಾಮಾಜಿಕ ಆಡಳಿತದ ಮುಖಂಡರಾಗಿದ್ದ ಮತ್ತು ರಾಜಕೀಯ ಆಡಳಿತಗಾರರೂ ಆಗಿದ್ದ ಗುಬ್ಬಿಹೊಸಳ್ಳಿ ಮಹಾನಾಡ ಪ್ರಭುಗಳು ತಮ್ಮ ರಾಜಕೀಯ ಅಧಿಕಾರ ನಾಶವಾದಮೇಲೆ ತಮ್ಮ ನೊಣಬ ಒಕ್ಕಲಿಗರನ್ನು ಲಿಂಗಾಯತರನ್ನಾಗಿ ಪರಿವರ್ತನೆ ಮಾಡುವ ಕೆಲಸವನ್ನು ಪವಿತ್ರಕಾರ್ಯ ಎಂಬಂತೆ ಮಾಡಿದರು. ಕುಡು ಒಕ್ಕಲಿಗ ಮೂಲದ ಸೊನ್ನಲಿಗೆಯ ಶ್ರೀಸಿದ್ಧರಾಮೇಶ್ವರನನ್ನೇ ಆರಾಧಿಸುವ ಇವರು ಇತ್ತೀಚೆಗೆ ತಮ್ಮನ್ನು ತಾವು 'ನೊಳಂಬರು', 'ನೊಳಂಬ ವೀರಶೈವರು' ಎಂದು ಕರೆದುಕೊಳ್ಳುತ್ತಿದ್ದಾರೆ.

ಲಿಂಗದೀಕ್ಷೆಯನ್ನು ಧಿಕ್ಕರಿಸಿದ ಅಲ್ಪಸಂಖ್ಯಾತರಾದ ಹಾಸನ-ಚನ್ನರಾಯ ಪಟ್ಟಣ ಭಾಗದ ನೊಣಬ ಒಕ್ಕಲಿಗರು ಅಲ್ಲಿನ ಇತರೆ ಒಕ್ಕಲಿಗ ಪ್ರಭೇದಗಳೊಂದಿಗೆ ವೈವಾಹಿಕ ಸಂಬಂಧ ಬೆಳೆಸಿ, ಕೊಟ್ಟು ತೆಗೆದುಕೊಳ್ಳುವ ಕೆಲಸ ಮಾಡಿ ಬೆರೆತು ಹೋಗಿದ್ದಾರೆ. ಇಂತಹವರು ನೊಣಬ ಒಕ್ಕಲಿಗರು ಎಂದು ಹೇಳಿಕೊಳ್ಳದೆ ಒಕ್ಕಲಿಗರು, ಗೌಡರು ಎಂದಷ್ಟೇ ಹೇಳಿ ಧರ್ಮಸಂಕಟದಿಂದ ಪಾರಾಗುತಿದ್ದಾರೆ.

ಆದರೆ ಹೀಗೆ ಕುಲದ ಹೆಸರನ್ನು ಮರೆಮಾಚದೆ ನೊಣಬ ಒಕ್ಕಲಿಗರು ಎಂದು ರಾಜಾರೋಷವಾಗಿ ಹೇಳಿಕೊಳ್ಳುತ್ತಾ ಗುಬ್ಬಿ ತಾಲೂಕಿನ 26 ಹಳ್ಳಿಗಳಲ್ಲಿ ತಮ್ಮ ಪುರಾತನ ಸಮುದಾಯದ ಪಳೆಯುಳಿಕೆಗಳಂತೆ ಇಂದಿಗೂ ಕೆಲವು ಜನರು ವಾಸಿಸುತ್ತಿದ್ದಾರೆ. ತುಮಕೂರು ತಾಲೂಕಿನಲ್ಲಿಯೂ ಇಂತಹವರು ವಿರಳವಾಗಿ ಕಂಡುಬರುತ್ತಾರೆ.

ನೊಣಬ ಪ್ರಭೇದದ ವಿಶೇಷತೆ ಏನೆಂದರೆ ಮೂರು ದಿವಸದವರು ಮತ್ತು ನಾಲ್ಕು ದಿವಸದವರು ಎಂಬ ಎರಡು ಶಾಖೆಗಳಿರುವುದು. ಮೂಲ ನೊಣಬ ಒಕ್ಕಲಿಗರಲ್ಲಿನ ಈ ಎರಡೂ ಶಾಖೆಗಳು ನೊಣಬ ಲಿಂಗಾಯತರಲ್ಲಿಯೂ ಮುಂದುವರೆದಿವೆ.

ಘಟ್ಟದ ಕೆಳಗಿನ ಪ್ರಬಲ ಕೃಷಿಕ ಪ್ರಭೇದವಾದ ಬಂಟರು ಮತ್ತು ಘಟ್ಟದ ಮೇಲಿನ ಕೃಷಿಕ ಪ್ರಭೇದವಾದ ಬಲ್ಲಾಳರಲ್ಲಿ ಸ್ವಲ್ಪ ಜನರು ಬಹುಹಿಂದೆಯೇ ಜೈನದೀಕ್ಷೆ ಪಡೆದು ಜೈನಧರ್ಮೀಯರಾಗಿರುವ ಕುರುಹುಗಳು ಇತಿಹಾಸ ಪುಟಗಳಲ್ಲಿ ದೊರೆಯುತ್ತದೆ.

ಇನ್ನು ಉತ್ತರ ಕರ್ನಾಟಕಕ್ಕೆ ಬಂದರೆ, ಆ ಭಾಗದ ಎಲ್ಲಾ ಒಕ್ಕಲಿಗರು ನೂರಕ್ಕೆ ನೂರರಷ್ಟು ಲಿಂಗಾಯತರಾಗಿದ್ದಾರೆ ಅಥವಾ ಅನಿವಾರ್ಯವಾಗಿ ಲಿಂಗಾಯತತ್ವವನ್ನು ಒಪ್ಪಿಕೊಂಡಿದ್ದಾರೆ. ಗಮನಿಸಬೇಕಾದ ಒಂದು ವಿಚಾರವೆಂದರೆ ಈ ಭಾಗದಲ್ಲಿ ಕೃಷಿಕರಾದ ಲಿಂಗಾಯತರನ್ನು ಒಕ್ಕಲಿಗರು ಎಂದು ಕರೆಯಲಾಗುತ್ತದೆ.

ದಕ್ಷಿಣ ಕರ್ನಾಟಕದಲ್ಲಿ ಒಕ್ಕಲಿಗ ಎಂಬುದು ಒಂದು ವೃತ್ತಿಯೂ ಆಗಿದೆ, ಜಾತಿಯೂ ಆಗಿದೆ. ಉತ್ತರ ಕರ್ನಾಟಕದಲ್ಲಿ ಜಾತಿಯನ್ನು ಮರೆಮಾಚಿ ವೃತ್ತಿಯನ್ನು ಮಾತ್ರ ಸ್ವೀಕರಿಸಲಾಗಿದೆ.

ಅದೇ ರೀತಿ ಲಿಂಗಾಯತ ಎನ್ನುವುದು ಒಂದು ಧರ್ಮ. ಮಾದಿಗ ಸಮುದಾಯದಿಂದ ಬ್ರಾಹ್ಮಣ ಸಮುದಾಯದವರೆಗೆ ಎಲ್ಲ ಜಾತಿಯ ಜನರು ಲಿಂಗದೀಕ್ಷೆಯ ಮೂಲಕ ಲಿಂಗಾಯತರಾಗಿದ್ದಾರೆ ಎಂಬುದನ್ನು ಮರೆತು ಲಿಂಗಾಯತ ಧರ್ಮವನ್ನು 'ಲಿಂಗಾಯತ ಜಾತಿ' ಎಂದು ಪರಿಗಣಿಸುತ್ತಿರುವುದು ವಿಷಾದಕರ ಸಂಗತಿಯಾಗಿದೆ.

ಬಹು ಹಿಂದಿನಿಂದಲೂ ಇದ್ದ ವೀರಶೈವ ಅಥವಾ ಲಿಂಗಾಯತ ಎಂಬ ಶುದ್ಧ ವಿಜ್ಞಾನ(Pure science)ವನ್ನು ಒಂದು ಚಿಂತನೆ- ಹೋರಾಟದ ಮೂಲಕ ಅನ್ವಯಕ ವಿಜ್ಞಾನ(Applied science)ವನ್ನಾಗಿ ಮಾಡಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ.[10] ಇಂತಹ ಭಕ್ತಿ ಭಂಡಾರಿ ಬಸವಣ್ಣನ ನಾಡಿನಲ್ಲಿ ಕಾರ್ಯಕ್ಷೇತ್ರದಲ್ಲಿ ಇಂತಹ ಪರಿವರ್ತನೆ ಸಹಜವೆ ಆಗಿದೆ.

ಕುಡು ಒಕ್ಕಲಿಗ ಮೂಲದ ಸೊನ್ನಲಿಗೆಯ ಸಿದ್ಧರಾಮ ಮತ್ತು ವಚನಕಾರ ಒಕ್ಕಲಿಗ ಮುದ್ದಣ್ಣ ಮೊದಲಾಗಿ ಬಹುಜನ ಒಕ್ಕಲಿಗರು ಈ ದೀಕ್ಷೆಗೆ, ಧಾರ್ಮಿಕ ಸ್ಥಿತ್ಯಂತರಕ್ಕೆ ಒಳಗಾದರು. ಮುಖ್ಯವಾಗಿ ಆ ಭಾಗದಲ್ಲಿ ದಟ್ಟವಾಗಿರುವ ಬಹುಸಂಖ್ಯಾತರಾಗಿರುವ ಕುಡು ಒಕ್ಕಲಿಗರು, ಪಂಚಮಸಾಲಿ ಒಕ್ಕಲಿಗರು, ಲಾಳಗೊಂಡ ಒಕ್ಕಲಿಗರು ಮೊದಲಾದವರನ್ನು ಹೆಸರಿಸಬಹುದು.

ಇದೇ ರೀತಿ ತೆಲುಗು ಒಕ್ಕಲಿಗರಲ್ಲಿ ಪ್ರಧಾನವಾಗಿರುವ ಹೇಮರೆಡ್ಡಿಗಳಲ್ಲಿ ಶೇ.90 ರಷ್ಟು ಜನರು ಲಿಂಗದೀಕ್ಷೆಗೆ ಒಳಗಾಗಿದ್ದಾರೆ. ಇತಿಹಾಸದ ವೀರ ಮಹಿಳೆ ಹೇಮರೆಡ್ಡಿ ಮಲ್ಲಮ್ಮ ಈ ಮೂಲದವಳು. ಉತ್ತರ ಕರ್ನಾಟಕದ ಬಹುತೇಕ ಲಿಂಗಾಯತ ಶಾಸಕರು ಈ ಮೂಲದವರೇ ಆಗಿರುವುದು ವಿಶೇಷ. ಅಲ್ಲದೆ ವೇಮ ರೆಡ್ಡಿ, ಪೋಕನಾಟಿ ರೆಡ್ಡಿ, ನರವಲ ರೆಡ್ಡಿ, ನರಡಿ ರೆಡ್ಡಿ ಮತ್ತಿತರ ತೆಲುಗು ಒಕ್ಕಲಿಗರು ತುಂಬ ಕಡಿಮೆ ಪ್ರಮಾಣದಲ್ಲಿ ಮತ ಬದಲಾವಣೆಗೆ ಒಳಗಾಗಿದ್ದಾರೆ. ಪ್ರಸ್ತುತ ಕಾಲಘಟ್ಟದಲ್ಲಿ ಮಧ್ಯಕರ್ನಾಟಕ ಮತ್ತು ಉತ್ತರ ಕರ್ನಾಟಕ ಭಾಗದಲ್ಲಿ ಒಕ್ಕಲಿಗರು ಎಂದು ಹೇಳಿಕೊಳ್ಳುವ ಒಂದು ಪ್ರಬಲ ಜಾತಿ ಇಲ್ಲದಿರುವುಕ್ಕೆ, ನಾಮಾವಶೇಷವಾಗಿರುವುದಕ್ಕೆ ಈ ಮತಾಂತರವೇ ಪ್ರಮುಖ ಕಾರಣವಾಗಿದೆ.

ಇನ್ನೊಂದು ಗಮನಿಸಬೇಕಾದ ಸಂಗತಿಯೆಂದರೆ ಧರ್ಮ ಜನರನ್ನು ಒಂದುಗೂಡಿಸುತ್ತದೆ. ಲೌಕಿಕ ಮತ್ತು ಆಧ್ಯಾತ್ಮಿಕ ಉನ್ನತಿ ಹೊಂದಲು ನೆರವಾಗುತ್ತದೆ ಎಂಬ ನಂಬಿಕೆ ಇದೆ. ಧರ್ಮ ಪ್ರವರ್ತಕರು, ಪ್ರವಚನಕಾರರು ಹಾಗೆ ಹೇಳುತ್ತಾಬರುತ್ತಿದ್ದಾರೆ. ವಿಪರ್ಯಾಸವೆಂದರೆ ಈ ಶಿಷ್ಟಧರ್ಮಗಳ ಅವಾಂತರಗಳಿಂದಾಗಿ ಬೃಹತ್ ಒಕ್ಕಲಿಗ ಜಾತಿ ಸಮುದಾಯ ವಿಘಟನೆಗೊಂಡಿದೆ, ಛಿದ್ರವಾಗಿದೆ. ಹಂತ ಹಂತವಾಗಿ ತನ್ನ ನೆಲೆಯನ್ನು ಕಳೆದುಕೊಂಡಿದೆ. ಅದೇ ರೀತಿ ಒಕ್ಕಲಿಗ ಪ್ರಭೇದಗಳು ಸಹ ಛಿದ್ರವಾಗಿವೆ. ಮತ್ತೊಂದು ಉದಾಹರಣೆಯಾಗಿ ಕುಂಚಿಟಿಗ ಒಕ್ಕಲಿಗರನ್ನು ತೆಗೆದುಕೊಳ್ಳಬಹುದು.

ನಿಸರ್ಗಾರಾಧನೆ ಮಾಡುತ್ತಿದ್ದ ಮತ್ತು ಬುಡಕಟ್ಟು ಧಾರ್ಮಿಕ ಸಂಪ್ರದಾಯಗಳನ್ನು ಪಾಲಿಸುತ್ತಿದ್ದ ಶೈವ-ಶಾಕ್ತ-ವೈದಿಕ ಪಂಥಗಳಲ್ಲಿ ಭೇದವೆಣಿಸದ ಕುಂಚಿಟಿಗ ಪ್ರಭೇದ ಮೊಟ್ಟಮೊದಲು ಜೈನ ಪ್ರಭಾವಕ್ಕೆ ಒಳಗಾಗಿ ವಿಘಟನೆಗೊಂಡಿತು. ದೀಕ್ಷೆ ಮೂಲಕ ಒಂದಷ್ಟು ಜನ ಜೈನರಾದರು. ತುಂಗಭದ್ರ ನದಿ ಆಚೆಗಿನ, ಹಾವೇರಿ-ಹುಬ್ಬಳ್ಳಿ ಸುತ್ತಮುತ್ತಲಿನ ಜನರು ಈ ಸ್ಥಿತ್ಯಂತರಕ್ಕೆ ಒಳಗಾದರು. ಇದು ತುಂಬಾ ಹಿಂದೆ ನಡೆದ ಸಾಮಾಜಿಕ

ಪ್ರಕ್ರಿಯೆ. ಸಣ್ಣ ಪ್ರಮಾಣದಲ್ಲಿ ಮುಸ್ಲಿಂ ಮತ್ತು ಕ್ರೈಸ್ತ ಧರ್ಮಗಳೆಡೆಗೆ ಸಾಗಿರುವ ಕುರುಹುಗಳೂ ಇವೆ. ಈ ಮೂರು ಧರ್ಮಗಳ ಹೊಡೆತದಿಂದ ಕುಂಚಿಟಿಗ ಪ್ರಭೇದಕ್ಕೆ ಅಂತಹ ಗಂಭೀರವಾದ ತೊಂದರೆ ಆಗಿಲ್ಲ. ಅಥವಾ ಆಗಿದ್ದರೂ ಅತ್ಯಲ್ಪ.

ಆದರೆ ದೊಡ್ಡ ಕೊಡಲಿ ಪೆಟ್ಟು ನೀಡಿದ್ದು ಮಾತ್ರ ವೀರಶೈವ ಮತ್ತು ವೀರವೈಷ್ಣವ ಧರ್ಮಗಳು. ವೀರಶೈವದ ಲಿಂಗದೀಕ್ಷೆಗೆ ಒಳಗಾದವರು ಕುಂಚಿಟಿಗ ಲಿಂಗಾಯತರಾರು. ವೀರವೈಷ್ಣವದ ಜನಿವಾರ ದೀಕ್ಷೆಗೆ ಒಳಗಾದವರು ಕುಂಚಿಟಿಗ ನಾಮಧಾರಿಗಳಾದರು. ಈ ಎರಡೂ ದೀಕ್ಷೆಗಳನ್ನು ದಿಕ್ಕರಿಸಿದವರು ಕುಂಚಿಟಿಗ ಒಕ್ಕಲಿಗರಾಗಿಯೇ ಉಳಿದರು. ಹೀಗಾಗಿ ಕುಂಚಿಟಿಗ ಎಂಬ ಒಂದು ಬುಡಕಟ್ಟು ಒಡೆದು ಲಿಂಗಾಯತರು, ನಾಮಧಾರಿಗಳು ಮತ್ತು ಒಕ್ಕಲಿಗರು ಎಂದು ಮೂರು ಭಾಗವಾಯಿತು, ಛಿದ್ರವಾಯಿತು, ಒಗ್ಗಟ್ಟು ನಾಶವಾಯಿತು. ಇದೆಲ್ಲಾ ಆಗಿದ್ದು ಸುಮಾರು 150 ವರ್ಷಗಳಿಂದೀಚೆಗೆ. ಇದರ ನಡುವೆ ಇತ್ತೀಚೆಗೆ ಕೆಲವು ಮಠಾಧೀಶರಿಂದ ಪ್ರೇರಿತರಾದ ಜನರು 'ನಾವು ಒಕ್ಕಲಿಗರೂ ಅಲ್ಲ, ಲಿಂಗಾಯತರೂ ಅಲ್ಲ, ನಾಮಧಾರಿಗಳೂ ಅಲ್ಲ, ಕೇವಲ ಕುಂಚಿಟಿಗರು, ನಾವೆಲ್ಲ ಕುಂಚಿಟಿಗರು ಒಂದಾಗೋಣ'' ಎಂದು ಪ್ರಚಾರ-ಪ್ರಯತ್ನ ಮಾಡುತ್ತಿದ್ದಾರೆ. ಈ ಪ್ರಚಾರ ಪ್ರಯತ್ನಗಳು ಹಂತ ಹಂತವಾಗಿ ಅಳಿದುಳಿದ ಕುಂಚಿಟಿಗರನ್ನು ಮಾನಸಿಕವಾಗಿ ಮತ್ತು ದೈಹಿಕವಾಗಿ ವೀರಶೈವದತ್ತ ಸೆಳೆಯುವ ಗುಪ್ತ ಕಾರ್ಯಾಚರಣೆಗಳಂತೆ ಕಾಣಬರುತ್ತಿವೆ.

ಕರ್ನಾಟಕದಲ್ಲಿ ಕ್ರಿಸ್ತಶಕ 15-16 ನೇ ಶತಮಾನದ ನಂತರ ಇಂತಹ ಧರ್ಮಾಂತರ ಪ್ರಕ್ರಿಯೆಗಳು ಆರಂಭವಾದವು. ಕಲ್ಯಾಣದಿಂದ ಆರಂಭಿಸಿ ಕೂಡಲಸಂಗಮದವರೆಗೆ ಉತ್ತರ ಕರ್ನಾಟಕದ ಭಾಗದಲ್ಲಿ ಮೊದಲಿಗೆ ವ್ಯಾಪಕವಾಗಿ ನಡೆದವು. ವ್ಯಾಪಾರ ವೃತ್ತಿಯ ಬಣಜಿಗರು ಮತ್ತು ಇತರೆ ಕಸುಬುಗಳ ಗಾಣಿಗ,ಬಳೆಗಾರ, ಹೂಗಾರ, ನೇಕಾರ, ಕಮ್ಮಾರ, ಕುಂಬಾರ, ಕುರುಬ ಮೊದಲಾದವರು ಮೊದಲಿಗೆ ಲಿಂಗದೀಕ್ಷೆಗೆ ಒಳಗಾದರು, ಲಿಂಗಾಯತರಾದರು. ಆದರೆ ಹಳ್ಳಿ ವಾಸಿಗಳಾದ ಶ್ರಮಸಂಸ್ಕೃತಿಯ ಒಕ್ಕಲಿಗ ಪ್ರಭೇದಗಳು ಸ್ವಲ್ಪ ತಡವಾಗಿ 18,19,20 ನೇ ಶತಮಾನಗಳಲ್ಲಿ ಹಂತ ಹಂತವಾಗಿ ಲಿಂಗಾಯತ ಪರಿಧಿಗೆ ಬಂದವು.

ದಕ್ಷಿಣ ಕರ್ನಾಟಕದಲ್ಲಿ ಕ್ರಿಸ್ತಶಕ 1800 ರ ನಂತರ ಶ್ರಮಿಕ ಒಕ್ಕಲಿಗ ಪ್ರಭೇದಗಳ ವೀರಶೈವೀಕರಣ ಶುರುವಾಯಿತು.[12] ಚಿತ್ರದುರ್ಗ, ಸಿದ್ಧಗಂಗೆ, ಗುಬ್ಬಿ, ಯಡೆಯೂರು, ಹರದನಹಳ್ಳಿ, ಬಾಳೆಹೊನ್ನೂರು ಮೊದಲಾದವು ಈ ಕಾರ್ಯಾಚರಣೆಯ ಕೇಂದ್ರಗಳಾದವು. ಮಠಾಧೀಶರು ಮತ್ತು ಅವರುಗಳ ಏಜೆಂಟರುಗಳು ಈ ದೀಕ್ಷಾ ಸಮಾರಂಭಗಳ ನೇತೃತ್ವ ವಹಿಸಿದರು. ಕಳೆದ 20 ನೇ ಶತಮಾನದ 6-7 ನೇ ದಶಕದವರೆಗೂ ಯಾವುದೇ ಮುಚ್ಚುಮರೆಯಿಲ್ಲದೆ ನಿರ್ವಿಘ್ನವಾಗಿ ಇಂತಹ ಕಾರ್ಯಕ್ರಮಗಳು ನಡೆದವು. ಕೀಳರಿಮೆಯಿಂದ ನರಳುತ್ತಿದ್ದ, ಬ್ರಾಹ್ಮಣರಂತೆ ಮೇಲುಸ್ತರಕ್ಕೆ ಏರಬೇಕು ಎಂದು ಹಂಬಲಿಸುತಿದ್ದ ಶ್ರಮಿಕ ಒಕ್ಕಲಿಗರ ತುಡಿತವೂ ಇದಕ್ಕೆ ಪೂರಕವಾಯಿತು.

ಹೀಗೆ ಲಿಂಗದೀಕ್ಷೆ ಪಡೆದು ಲಿಂಗಧಾರಣೆ ಮಾಡಿಕೊಂಡ ಒಕ್ಕಲಿಗರು ಒಕ್ಕಲಿಂಗರಾದರು. ಅಂಗದ ಮೇಲೆ ಲಿಂಗ ಧರಿಸಿ, ಮನೆಯಲ್ಲಿ ಮಾಂಸಾಹಾರ ತ್ಯಜಿಸಿ 'ನಾವು ಶ್ರೇಷ್ಠರು ಬ್ರಾಹ್ಮಣರಿಗೆ ಸರಿಸಮಾನರು' ಎಂಬ ಭ್ರಮೆಗೆ ಒಳಗಾಗಿ ಮೂಲ

ಒಕ್ಕಲಿಗರಿಂದ ದೂರವಾದರು. 1980 ರ ದಶಕದಲ್ಲಿ ಒಂದು ದಿನ ತುಮಕೂರು ಜಿಲ್ಲೆ ಗುಬ್ಬಿ ತಾಲೂಕಿನ ಚೇಳೂರು-ಸೋಮಲಾಪುರ ಭಾಗದಲ್ಲಿ ಸುಮಾರು ಮೂವತ್ತು ಸಾವಿರ ಚೋಳ ಒಕ್ಕಲಿಗರು ಲಿಂಗದೀಕ್ಷೆ ಪಡೆದು ಲಿಂಗಾಯತರಾದದ್ದು ಇತ್ತೀಚಿನ ಬಹುದೊಡ್ಡ ಉದಾಹರಣೆ.[13] ತದನಂತರ ದೊಡ್ಡ ಪ್ರಮಾಣದ ದೀಕ್ಷಾ ಸಮಾರಂಭಗಳು ನಿಂತುಹೋದವು. ಆದರೆ ಮಠ-ಮಂದಿರಗಳಲ್ಲಿ, ವೈಯಕ್ತಿಕ ಹಂತದಲ್ಲಿ ಈಗಲೂ ಇಂತಹ ಪ್ರಯತ್ನಗಳು ನಡೆಯುತ್ತಲೇ ಇವೆ.

ಬಹುಶಃ ಈ ದೊಡ್ಡ ಮತಾಂತರದ ಪ್ರಕ್ರಿಯೆಗಳು ದೀಕ್ಷಾಸಮಾರಂಭಗಳು ನಿಲ್ಲಲು ಮುಖ್ಯ ಕಾರಣವೆಂದರೆ ಅಳಿದುಳಿದ ಒಕ್ಕಲಿಗರ ರಾಜಕೀಯ ಮತ್ತು ಧಾರ್ಮಿಕ ಜಾಗೃತಿ. ಇಂತಹ ಜಾಗೃತಿಗೆ ಎಲ್ಲರೂ ಕಾರಣರಾಗಿದ್ದರೂ ಮುಖ್ಯವಾಗಿ ರಾಜಕೀಯ ನೇತಾರರಾದ ಶ್ರೀ ಹೆಚ್.ಡಿ. ದೇವೇಗೌಡರು ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಅದ್ವಿತೀಯರಾದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಯವರನ್ನು ಸ್ಮರಿಸಬೇಕು. ಈ ಇಬ್ಬರು ಧುರೀಣರಿಂದ ಸಂಘಟಿತ ಜಾಗೃತ ಪ್ರಯತ್ನಗಳು ನಾಡಿನಾದ್ಯಂತ ವ್ಯಾಪಕವಾಗಿ ನಡೆಯದಿದ್ದರೆ ಬೃಹತ್ ಒಕ್ಕಲಿಗ ಸಮುದಾಯ ತನ್ನ ವ್ಯಾಪ್ತಿಯನ್ನು, ವಾಸದ ನೆಲೆಯನ್ನು, ಜನಸಂಖ್ಯೆಯನ್ನು ಮತ್ತಷ್ಟು ಕಳೆದುಕೊಳ್ಳಬೇಕಾದ ಸನ್ನಿವೇಶ ಬರುತ್ತಿತ್ತು. ಅಥವಾ ಎಲ್ಲ ಒಕ್ಕಲಿಗರೂ ಲಿಂಗಾಯತರಾಗುತ್ತಿದ್ದರು.

ಈ ಎಲ್ಲಾ ಸಾಮಾಜಿಕ ಧಾರ್ಮಿಕ ಪ್ರಕ್ರಿಯೆಗಳ, ಸ್ಥಿತ್ಯಂತರಗಳ ಜೊತೆಗೆ ಅಭಿವೃದ್ಧಿಯಾದವರು- ಅಭಿವೃದ್ಧಿಯಾಗದವರು, ಮುಂದುವರೆದವರು-ಹಿಂದುಳಿದವರು ಎಂಬ ಕಾರಣವನ್ನು ನೀಡಿ ಸರ್ಕಾರ ತನ್ನ ಮೀಸಲಾತಿ ಪಟ್ಟಿಯಲ್ಲಿ ಎಲ್ಲ ಒಕ್ಕಲಿಗ ಪ್ರಭೇದಗಳನ್ನು ಒಂದೇ ಕ್ಯಾಟಗರಿಯಲ್ಲಿ ಸೇರಿಸಿಲ್ಲ. ಬೇರೆ ಬೇರೆ ಗುಂಪಿನಲ್ಲಿ ಪ್ರವರ್ಗದಲ್ಲಿ ಅವಕಾಶ ನೀಡಿದೆ.

ಎಲ್ಲ ರೀತಿಯಿಂದ ಹಿಂದುಳಿದಿರುವ ಮೂಲ ಬುಡಕಟ್ಟು ಹಂತದಲ್ಲಿಯೇ ಇರುವ ಗೊಂಡ ಮತ್ತು ಸೋಲಿಗ ಪ್ರಭೇದಗಳನ್ನು ಪರಿಶಿಷ್ಠ ಪಂಗಡದಲ್ಲಿ ಸೇರಿಸಿದೆ.

ಕರಾವಳಿ ಭಾಗದ ಅಟ್ಟೆ, ಗಾಮ, ಕರೆ, ಕುಂಚ್, ಹಾಲಕ್ಕಿ ಪ್ರಭೇದಗಳನ್ನು ಮತ್ತು ಹಾಸನ-ಚಿಕ್ಕಮಗಳೂರು ಭಾಗದ ತೆಲಗಗೌಡರನ್ನು ಹಿಂದುಳಿದ ಪ್ರವರ್ಗ 1ರಲ್ಲಿ ಸೇರಿಸಿದೆ.

ಸರ್ಪ ಒಕ್ಕಲಿಗರಿಗೆ ಸಲಪರು ಎಂಬ ಮತ್ತೊಂದು ಹೆಸರು ಇದೆ. ಸರ್ಪ ಒಕ್ಕಲಿಗ ಪ್ರವರ್ಗ 3ಎ ಯಲ್ಲಿ ಸೇರ್ಪಡೆಯಾಗಿದ್ದರೆ ಸಲಪರು ಪ್ರವರ್ಗ 1ರಲ್ಲಿ ಸ್ಥಾನ ಪಡೆದಿದೆ. ಇಂತಹ ಒಂದು ಗೊಂದಲವು ಇದೆ.

ನಾಡವ, ರಾಜಪುರಿ, ತುಳುವ, ಸಾದ ಪ್ರಭೇದಗಳು ಪ್ರವರ್ಗ 2ಎ ಯಲ್ಲಿ ಸೇರಿವೆ.

ಇನ್ನುಳಿದಂತೆ ಬಹುತೇಕ ಒಕ್ಕಲಿಗ ಪ್ರಭೇದಗಳು ಪ್ರವರ್ಗ 3ಎ ಯಲ್ಲಿ ಸೇರ್ಪಡೆಯಾಗಿವೆ.

ಆದರೆ ಕರಾವಳಿ ಭಾಗದ ಬಲಿಷ್ಠ ಬಂಟ, ಪರಿವಾರ ಪ್ರಭೇದಗಳು ಮತ್ತು ವಿವಿಧ ದೀಕ್ಷೆಗಳನ್ನು ಪಡೆದ ಎಲ್ಲ ಒಕ್ಕಲಿಗ ಪ್ರಭೇದಗಳು ಜೈನ-ವೈಷ್ಣವ-ಲಿಂಗಾಯತ-ಕ್ರೈಸ್ತ ಎಂದು ಪರಿಗಣಿಸಲ್ಪಟ್ಟು ಪ್ರವರ್ಗ 3ಬಿ ಯಲ್ಲಿ ಸ್ಥಾನ ಪಡೆದಿವೆ.[14]

ಇನ್ನೊಂದು ವಿಷಯವೆಂದರೆ ಮೀಸಲಾತಿಯ ಮೂಲಕ ಸರ್ಕಾರಿ ಸವಲತ್ತುಗಳನ್ನು ಪಡೆಯಲು ಹಲವಾರು ಒಕ್ಕಲಿಗ ಪ್ರಭೇದಗಳು ಹಿಂದುಳಿದವರ ಪಟ್ಟಿಗೆ ಸೇರಲು ತುದಿಗಾಲ ಮೇಲೆ ನಿಂತಿವೆ, ಸರ್ಕಾರವನ್ನು ಒತ್ತಾಯಿಸುತ್ತಿವೆ.

ಇನ್ನು ಒಕ್ಕಲಿಗರ ಸಂಘರ್ಷ ಮತ್ತು ಸಾಮರಸ್ಯಕ್ಕೆ ಬರೋಣ. ಬೃಹತ್ ಒಕ್ಕಲಿಗ ಸಮುದಾಯದ ಸಿಂಹಾವಲೋಕನ ಮಾಡಿದಾಗ ಇಲ್ಲಿ ಸಂಘರ್ಷಕ್ಕಿಂತಲೂ ಸಾಮರಸ್ಯವೆ ಮುಖ್ಯವಾಗಿ ಕಂಡುಬರುತ್ತದೆ. ಅಧಿಕಾರ ಅಧಿಪತ್ಯಗಳಿಗಾಗಿ ಹಪಹಪಿಸದ, ಹಂಬಲಿಸದ ಶ್ರಮಸಂಸ್ಕೃತಿಯ ನೈಜಕೃಷಿಕರಲ್ಲಿ, ಸಾಮಾನ್ಯ ಒಕ್ಕಲಿಗರಲ್ಲಿ ಯಾವುದೇ ರೀತಿಯ ಸಂಘರ್ಷಗಳಿಲ್ಲ ಹೋರಾಟಗಳಿಲ್ಲ. ಮಹಾಕವಿ ಕುವೆಂಪು ಹೇಳಿದಂತೆ ಅವರೆಲ್ಲಾ ಗದ್ದುಗೆ ಮಕುಟಗಳಿಗೆ ಆಸೆ ಪಡದೆ ನಿಜವಾದ ಅರ್ಥದಲ್ಲಿ ನೇಗಿಲಯೋಗಿಗಳಾಗಿದ್ದಾರೆ, ಸಾಮರಸ್ಯದಿಂದ ಬಾಳುವೆ ಮಾಡುತ್ತಿದ್ದಾರೆ.

ಆದರೆ ಅಧಿಕಾರ-ಅಧಿಪತ್ಯ-ಗದ್ದುಗೆ-ಮಕುಟಗಳಿಗೆ ಹಂಬಲಿಸುವ ಸ್ಪರ್ಧಿಸುವ ಮಹತ್ವಾಕಾಂಕ್ಷಿ ನಾಯಕರಲ್ಲಿ ಸಂಘರ್ಷವಿದೆ, ಹೋರಾಟವಿದೆ, ಹೊಡೆದಾಟ, ಬಡಿದಾಟವಿದೆ. ಇದು ನೆನ್ನೆ ಮೊನ್ನೆಯದಲ್ಲ. ಪ್ರಾಚೀನ ಕಾಲದಿಂದಲೂ ನಡೆದು ಬಂದಿರುವಂತಹದ್ದು. ಇತಿಹಾಸದ ಪುಟಗಳನ್ನು ಅವಲೋಕನ ಮಾಡಿದಾಗ ಕರ್ನಾಟಕವನ್ನು ಆಳಿದ ಗಂಗರು, ನೊಳಂಬರು, ಹೊಯ್ಸಳರು, ಚಾಲುಕ್ಯರು, ರಾಷ್ಟ್ರಕೂಟರು, ಅಳುಪರು, ಯಲಹಂಕನಾಡ ಪ್ರಭುಗಳು, ಮಧುಗಿರಿ ಮಹಾನಾಡ ಪ್ರಭುಗಳು ಮೊದಲಾದವರು ವಿವಿಧ ಒಕ್ಕಲಿಗ ಮೂಲದವರೇ ಆಗಿದ್ದು, ಇವರುಗಳ ನಡುವೆ ಬೇರೆ ಬೇರೆ ಕಾಲಘಟ್ಟದಲ್ಲಿ ರಾಜಕೀಯ ಅಧಿಪತ್ಯಗಳಿಗಾಗಿ ಸಂಘರ್ಷಗಳು ನಡೆದಿವೆ, ಯುದ್ಧಗಳು ಸಂಭವಿಸಿವೆ.

ಪ್ರಸ್ತುತ ಕಾಲಘಟ್ಟದಲ್ಲಿ ಸಮಕಾಲೀನ ಸಂದರ್ಭದಲ್ಲಿ ರಾಜಕೀಯ-ಆರ್ಥಿಕ-ಸಾಮಾಜಿಕ ಮತ್ತಿತರ ಕ್ಷೇತ್ರಗಳಲ್ಲಿ ಅಧಿಕಾರ ಸ್ಥಾನ ಪಡೆಯಲು ಸಂಘರ್ಷಗಳು ನಡೆಯುತ್ತವೆ. ಅದರಲ್ಲೂ ಚುನಾವಣೆಗಳ ಸಂದರ್ಭಗಳಲ್ಲಿ ಸಂಘರ್ಷ ತಾರಕಕ್ಕೇರುತ್ತದೆ. ಒಮ್ಮೊಮ್ಮೆ ನೇತಾರರಿಂದ ಆರಂಭಗೊಂಡು ಸಾಮಾನ್ಯನವರೆಗೂ ವ್ಯಾಪಿಸುತ್ತದೆ. ಇದನ್ನು ರಾಮನಗರ ಭಾಗದ ಗಂಗಡಿಕಾರ ಒಕ್ಕಲಿಗರಲ್ಲಿನ ಪೆಟ್ಟಿಗೆಯವರು ಮತ್ತು ಬುಜ್ಜಣಿಗೆಯವರಲ್ಲಿ ಕಾಣಬಹುದು. ಹಾಸನ ಭಾಗದಲ್ಲಿ ದಾಸ ಒಕ್ಕಲಿಗರು ಮತ್ತು ಮುಳ್ಳು ಒಕ್ಕಲಿಗರಲ್ಲಿ, ಕೋಲಾರ ಭಾಗದಲ್ಲಿ ಮೊರಸು ಒಕ್ಕಲಿಗರು ಮತ್ತು ಮುಸುಕು ಒಕ್ಕಲಿಗರಲ್ಲಿ ಕಾಣಬಹುದು. ಇಂತಹ ಸಂಘರ್ಷ ಚುನಾವಣೆಗಳಿಗೆ ಮಾತ್ರ ಸೀಮಿತವಾಗಿದ್ದರೆ ತುಂಬಾ ಒಳ್ಳೆಯದು.

ಇದರ ಜೊತೆಗೆ ಇನ್ನೂ ಒಂದು ರೀತಿಯ ಸಂಘರ್ಷವಿದೆ. ಅದು ಒಕ್ಕಲಿಗರು(ಮೂಲ ಒಕ್ಕಲಿಗರು) ಮತ್ತು ಒಕ್ಕಲಿಂಗರು(ಲಿಂಗವಂತ ಒಕ್ಕಲಿಗರು)ಗಳ ನಡುವಿನ ಸಂಘರ್ಷ. ಇದು ಸಹ ಅಧಿಕಾರ ಸ್ಥಾನಗಳಿಗಾಗಿ ಚುನಾವಣೆ ಸಂದರ್ಭಗಳಲ್ಲಿ ಮಾತ್ರ ನಡೆಯುತ್ತದೆ. ಉತ್ತರ ಕರ್ನಾಟಕದಲ್ಲಿ ಮತ್ತು ಮಧ್ಯೆ ಕರ್ನಾಟಕದಲ್ಲಿ ಎಲ್ಲ ಒಕ್ಕಲಿಗರು ಲಿಂಗಾಯತರಾಗಿರುವುದ ರಿಂದ ಅಲ್ಲಿ ಈ ರೀತಿಯ ಸಂಘರ್ಷಗಳಿಗೆ ಅವಕಾಶವಿಲ್ಲ. ಆದರೆ ದಕ್ಷಿಣ ಕರ್ನಾಟಕದಲ್ಲಿ ಮತಪರಿವರ್ತನೆಯ ಪ್ರಕ್ರಿಯೆ ಪೂರ್ಣ ಪ್ರಮಾಣದಲ್ಲಿ ನಡೆಯದೇ ಇರುವುದರಿಂದ ಇಲ್ಲಿ ಒಕ್ಕಲಿಗರೂ ಇದ್ದಾರೆ, ಒಕ್ಕಲಿಂಗರೂ ಇದ್ದಾರೆ. ಹೀಗಾಗಿ ಸಹಜವಾಗಿ ಸಂಘರ್ಷ ನಡೆಯುತ್ತದೆ. ಇಂತಹ ಸಂಘರ್ಷವನ್ನು ಮೈಸೂರು-

ಚಾಮರಾಜನಗರ-ಬೆಂಗಳೂರು-ತುಮಕೂರು-ಹಾಸನ ಜಿಲ್ಲೆಗಳ ಆಯ್ದ ಚುನಾವಣಾ ಕ್ಷೇತ್ರಗಳಲ್ಲಿ ಕಾಣಬಹುದು.

ಮೇಲ್ಮಟ್ಟದಲ್ಲಿ ಅಧಿಕಾರ ಸ್ಥಾನದಲ್ಲಿ ಇಂತಹ ಎಷ್ಟೇ ಸಂಘರ್ಷಗಳಿದ್ದರೂ ಬೃಹತ್ ಒಕ್ಕಲಿಗ ಸಮುದಾಯದ ಸಾಮರಸ್ಯಕ್ಕೆ ಯಾವುದೇ ಭಂಗಬಂದಿಲ್ಲ. ಶ್ರಮಿಕ ಜನರಲ್ಲಿ ಅದು ಜೀವನ ಧರ್ಮವಾಗಿದೆ. ಸಾಮರಸ್ಯ ಇಲ್ಲದೆ ಇದ್ದರೆ ಕೃಷಿ ಚಟುವಟಿಕೆಗಳನ್ನು ನಡೆಸಲು ಗ್ರಾಮ ಜೀವನವನ್ನು ಯಶಸ್ವಿಯಾಗಿ ಮುನ್ನಡೆಸಲು ಸಾಧ್ಯವಾಗುವುದಿಲ್ಲ.

ಪ್ರಾದೇಶಿಕ ಭಿನ್ನತೆ, ಸಂಪರ್ಕದ ಕೊರತೆ, ಆರ್ಥಿಕ ಮತ್ತು ಶೈಕ್ಷಣಿಕ ತಾರತಮ್ಯ, ದೀಕ್ಷೆ ಇಲ್ಲವೆ ಮತಾಂತರದ ಅವಾಂತರ, ಸಸ್ಯಾಹಾರ ಸೇವನೆ-ಮಾಂಸಾಹಾರ ಸೇವನೆ ಎಂಬ ಆಹಾರದಲ್ಲಿನ ಮೇಲು ಕೀಳಿನ ಮನೋಭಾವ ಮೊದಲಾದ ಕಾರಣಗಳಿಂದಾಗಿ ಒಕ್ಕಲಿಗ ಪ್ರಭೇದಗಳೂ ಛಿದ್ರವಾಗುತ್ತಿವೆ, ವಿಘಟನೆಯಾಗುತ್ತಿವೆ. ಕೆಲವು ಪ್ರಭೇದಗಳೂ ಒಕ್ಕಲಿಗ ಬ್ಯಾನರಿನಿಂದ ದೂರ ಉಳಿಯುವಂತೆ ಪ್ರಚೋದನೆಗೆ ಒಳಗಾಗುತ್ತಿವೆ.

**ಕೊನೆ ಟಿಪ್ಪಣಿ:**

1. ನಾಗರಾಜು ಎಂ.ಎಚ್, ಮೊರಸು ಒಕ್ಕಲಿಗರು – ಒಂದು ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು: ಗೋಧೂಳಿ ಪ್ರಕಾಶನ.
2. ಕೃತಿಯ ಲೋಕಾರ್ಪಣೆ ಸಂದರ್ಭದಲ್ಲಿ (ದಿ:06.11.2011) ಜಾನಪದ ವಿದ್ವಾಂಸರಾದ ಡಾ.ಎನ್.ಆರ್. ನಾಯಕ ಅವರು ಮಾತನಾಡಿ ಈ ಬುಡಕಟ್ಟು-ನಡುಕಟ್ಟು-ತಲೆಕಟ್ಟುಗಳನ್ನು ಪ್ರಸ್ತಾಪಿಸಿ ಗಮನಸೆಳೆದರು.
3. ನಾಗೇಗೌಡ ಹೆಚ್.ಎಲ್ ಅವರ ಪ್ರವಾಸಿ ಕಂಡ ಇಂಡಿಯಾ ಸಂಪುಟ-8, ಮೈಸೂರು: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.
4. 1929ರಲ್ಲಿ ಮೈಸೂರಿನ ರಾವ್ ಬಹದ್ದೂರ್ ಡಿ.ಬಸುಮಯ್ಯನವರು ಹೊರಡಿಸಿದ ಕರಪತ್ರ, ಕುಂಚಿಟಿಗರ ಮಹಾಸಮ್ಮೇಳನ 2012ರ ಸ್ಮರಣ ಸಂಚಿಕೆ ಕುಂಚಿಟಿಗರುನಲ್ಲಿ ದಾಖಲಾಗಿದೆ.
5. ನಾಗರಾಜು.ಎಂ.ಎಚ್, 2011. ಪೂರ್ವೋಕ್ತ, ಪು:17.
6. ನಾಗರಾಜು ಎಂ.ಎಚ್, 2003. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ, ಪು:42-44, ತುಮಕೂರು: ಅನಿಕೇತನ ಪ್ರಕಾಶನ.
7. ಹೆಚ್ಚಿನ ವಿವರಕ್ಕಾಗಿ ಗಮನಿಸಿ: ಮೊರಸು ಒಕ್ಕಲಿಗರು – ಒಂದು ಸಾಂಸ್ಕೃತಿಕ ಅಧ್ಯಯನ ಕೃತಿಯಲ್ಲಿ 'ವಾಚಕರಿಗೆ ಲೇಖಕನ ಪತ್ರ'.
8. ಕ್ಷೇತ್ರಕಾರ್ಯದ ಸಂದರ್ಭಗಳಲ್ಲಿ ನೂರಾರು ವಕ್ತೃಗಳಿಂದ ಈ ಬಗ್ಗೆ ಪುರಾವೆಗಳನ್ನು, ಮಾಹಿತಿಗಳನ್ನು ಪಡೆದಿರುತ್ತೇನೆ.
9. ಶ್ರೀಮಠದ ಕರಪತ್ರಗಳು ಮತ್ತು ಪೀಠಾಧ್ಯಕ್ಷರಾದ ಶ್ರೀಗಳ ಪತ್ರಿಕಾ ಹೇಳಿಕೆಗಳಿಂದ ಮಾಹಿತಿಯನ್ನು ಪಡೆಯಲಾಗಿದೆ.
10. ಅರವಿಂದ ಮಾಲಗತ್ತಿ (ಪ್ರ.ಸಂ.) 2006. ಕನ್ನಡ ವಿಷಯ ವಿಶ್ವಕೋಶ-ಜಾನಪದ, ಪು:859-860,
11. 2012 ರಲ್ಲಿ ಬೆಂಗಳೂರು ಅರಮನೆ ಮೈದಾನದಲ್ಲಿ ನಡೆದ ಕುಂಚಿಟಿಗರ ಮಹಾಸಮ್ಮೇಳನದ ಸಂದರ್ಭದಲ್ಲಿ (27-05-2012) ಈ ಕೂಗು ಕೇಳಿಬಂದಿತು.
12. ವೀರಶೈವೀಕರಣಕ್ಕೆ ಒಳಗಾದ ನೂರಾರು ಒಕ್ಕಲಿಗ ಕುಟುಂಬಗಳ ಹಿರಿಯರನ್ನು ಅವರ ಸಮಕಾಲೀನರನ್ನು ಮಾತಾನಾಡಿಸಿದಾಗ ತಿಳಿದು ಬಂದಿತು.

13. ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕು ಬೆಲವತ್ತ ಗ್ರಾಮದ ಪ್ರಭಾವಿ ಗೌಡಿಕೆ ಕುಟುಂಬದ ಜಿ.ಹೆಚ್. ಹೊನ್ನಲಿಂಗೇಗೌಡರು (ಇವರ ತಾತ ಜಿ.ಹೆಚ್.ಹೊನ್ನಹಲಿಗೇಗೌಡರು ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು) ಈ ವಿಷಯವನ್ನು ನನ್ನ ಗಮನಕ್ಕೆ ತಂದರು. ಇದನ್ನು ಬೇರೆ ಬೇರೆ ಮೂಲಗಳಿಂದ ಖಾತರಿ ಪಡಿಸಿಕೊಂಡಿರುತ್ತೇನೆ.
14. ಕರ್ನಾಟಕ ಸರ್ಕಾರ ಒದಗಿಸಿರುವ ಮೀಸಲಾತಿ ಪಟ್ಟಿಯ ಆಧಾರದ ಮೇಲೆ ಈ ವಿಷಯಗಳನ್ನು ಸಂಗ್ರಹಿಸಲಾಗಿದೆ.

## ಅಧ್ಯಯನದ ಆಕರಗಳು

ಕ್ಷೇತ್ರಕಾರ್ಯದಲ್ಲಿ ವಕ್ತೃಗಳಿಂದ ಸಂಗ್ರಹಿಸಿದ ಮಾಹಿತಿಗಳು ಮತ್ತು ಅವರೊಂದಿಗಿನ ಸಂವಾದದಲ್ಲಿ ಕಂಡುಕೊಂಡು ಸತ್ಯಗಳು ಹಾಗೂ ಕೆಳಕಂಡ ಪರಾಮರ್ಶನ ಗ್ರಂಥಗಳು.


1. ಕರ್ನಾಟಕ ಪರಂಪರೆ–ಸಂ : ಡಾ. ಆರ್.ಆರ್. ದಿವಾಕರ್, ಪ್ರ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ. ಬೆಂಗಳೂರು
2. ಕರ್ನಾಟಕ ಸಂಸ್ಕೃತಿ ಸಮೀಕ್ಷೆ–ಲೇ : ಡಾ. ಹೆಚ್. ತಿಪ್ಪೆರುದ್ರಸ್ವಾಮಿ, ಡಿವಿಕೆ ಮೂರ್ತಿ, ಪ್ರಕಾಶಕರು, ಮೈಸೂರು
3. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ – ಡಾ. ಎಂ. ಚಿದಾನಂದಮೂರ್ತಿ, ಮೈಸೂರು ವಿ.ವಿ. ಮೈಸೂರು
4. ಕನ್ನಡ ವಿಷಯ ವಿಶ್ವಕೋಶ – ಕರ್ನಾಟಕ – ಡಾ. ಹಿ.ಶಿ.ರಾಮಚಂದ್ರೇಗೌಡ, ಮೈಸೂರು ವಿ.ವಿ. ಮೈಸೂರು
5. ಕನ್ನಡ ವಿಷಯ ವಿಶ್ವಕೋಶ–ಇತಿಹಾಸ ಮತ್ತು ಪುರಾತತ್ವ – ಡಾ. ಅಂಬಳಿಕೆ ಹಿರಿಯಣ್ಣ, ಮೈಸೂರು ವಿ.ವಿ. ಮೈಸೂರು
6. ಕನ್ನಡ ವಿಷಯ ವಿಶ್ವಕೋಶ–ಜಾನಪದ – ಡಾ. ಅರವಿಂದ ಮಾಲಗತ್ತಿ, ಮೈಸೂರು ವಿ.ವಿ. ಮೈಸೂರು
7. ಕರ್ನಾಟಕದ ಬುಡಕಟ್ಟುಗಳು – ಡಾ. ಹೆಚ್.ಜಿ. ಲಕ್ಕಪ್ಪಗೌಡ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
8. Castes and Tribes of Southern India - Edgar Thurston and Rangachari, Cosmo Publications, New Delhi
9. Ethnographical notes of Southern India - Edgar Thurston and Rangachari, Cosmo Publications, New Delhi
10. The Caste System of North India - E.A. Blunt
11. The Mysore Tribes and castes - H.V. Nanjundaiah and L.K. Ananthkrishna Iyer
12. The Tribes and Castes of Bombay - Enthoven R.E. Cosmo Publications, New Delhi
13. A journey from Madras through the countries of Mysore Canara and Malbar - Francis Buchanun
14. Mysore Gazatteer - C. Hayavadhana Rao
15. ಕರ್ನಾಟಕ ರಾಜ್ಯಕೋಶ–4, ಜನಸಮುದಾಯ ಸಂಪುಟ – ಸಂ : ಹೆಚ್.ಡಿ. ಪ್ರಕಾಶ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ


■

# ಪುರಿ ಜಗನ್ನಾಥ ದೇವಾಲಯದ ಇತಿಹಾಸ

▫ ಮನು ವಿ. ದೇವದೇವನ್
ಸಹಾಯಕ ಪ್ರಾಧ್ಯಾಪಕರು,
ಮಾನವಿಕ ಮತ್ತು
ಸಮಾಜ ವಿಜ್ಞಾನ ವಿಭಾಗ,
ಐ.ಐ.ಟಿ. ಮಂಡಿ,
ಹಿಮಾಚಲ ಪ್ರದೇಶ
ಪಿನ್-175001
discoverie@gmail.com

(ಭಾಗ-3)

*(ಕಳೆದ ಸಂಚಿಕೆಯಿಂದ)*

ಅನಂಗಭೀಮನ ಹಸ್ತಕ್ಷೇಪದಿಂದ ಪುರಿಯ ದೇವಾಲಯದಲ್ಲಿ ಉಂಟಾದ ಮಾರ್ಪಾಟುಗಳು ದೂರಗಾಮಿಯಾಗಿದ್ದರೂ ಅವುಗಳ ಪೂರ್ಣ ಸ್ವರೂಪ ಯಾ ಪರಿಣಾಮಗಳನ್ನು ಬಯಲುಪಡಿಸುವ ಸಮಕಾಲೀನ ಆಕರಗಳ ಕೊರತೆಯಿಂದಾಗಿ ಈ ಕುರಿತು ಯಾವುದೇ ವಿಶ್ಲೇಷಣೆ ಸೀಮಿತವಾದ ಹೊಳಹುಗಳನ್ನು ಮಾತ್ರ ನೀಡಬಲ್ಲುದು. ವಿಸ್ತೃತವಾಗಿ ಅಲ್ಲದಿದ್ದರೂ ಖಚಿತವಾಗಿ ಉಲ್ಲೇಖಿಸಬಹುದಾದ್ದು ನಾಲ್ಕು ವಿಚಾರಗಳನ್ನು ಮಾತ್ರ. ಒಂದು, ಪುರುಷೋತ್ತಮ-ಲಕ್ಷ್ಮಿಯರ ಮಂದಿರವಾಗಿದ್ದ ಶ್ರೀಮಂದಿರದಲ್ಲಿ ಈಗ ಜಗನ್ನಾಥ-ಸುಭದ್ರಾ-ಬಲಭದ್ರರು ಸುದರ್ಶನಚಕ್ರದೊಂದಿಗೆ ರಾರಾಜಿಸತೊಡಗಿದರು. ಎರಡು, ಹಳೆಯ ಆರಾಧನಾಕ್ರಮಗಳನ್ನು ಬದಲಿಸಿ ಅಥವಾ ಸುಧಾರಿಸಿ ಮೂವತ್ತಾರು ನಿಯೋಗಗಳನ್ನು ಏರ್ಪಡಿಸಲಾಯಿತು. ಮೂರು, ಬ್ರಾಹ್ಮಣರಿಗೆ ಹಾಗೂ ದೇವಾಲಯದ ಅರ್ಚಕಾದಿ ಸೇವಕ ಬಳಗಕ್ಕೆ ಸೇರಿದವರಿಗೆ ಅಪಾರ ಸಂಖ್ಯೆಯಲ್ಲಿ ನೆಲವನ್ನು ದತ್ತಿ ನೀಡಲಾಯಿತು. ನಾಲ್ಕು, ತನ್ನ ರಾಜ್ಯವನ್ನು ಜಗನ್ನಾಥನಿಗೆ ಸಮರ್ಪಿಸಿ ಅವನ ರಾವುತ ಹಾಗೂ ಪುತ್ರನಾಗಿ ಅನಂಗಭೀಮನು ರಾಜ್ಯಭಾರ ನಡೆಸುತ್ತಿರುವುದಾಗಿ ಘೋಷಿಸಲಾಯಿತು.

ಈ ನಾಲ್ಕನೆಯ ವಿಚಾರ ಒಡಿಶ್ಶಾದಲ್ಲಿನ ರಾಜಕಾರಣದ ಇತಿಹಾಸದಲ್ಲಿ ನಡೆದ ಬಹುದೊಡ್ಡ ಪಲ್ಲಟವಾಗಿತ್ತು.[1] ರಾಜ್ಯವನ್ನು ಆಳುತ್ತಿರುವವನು ಬೇರೆ ಯಾರೂ ಅಲ್ಲ, ಸಾಕ್ಷಾತ್ ಜಗನ್ನಾಥ, ತಾನು ಅವನ

ಮರ್ತ್ಯರೂಪದಲ್ಲಿರುವ ಪ್ರತಿನಿಧಿ ಮಾತ್ರ ಎಂಬ ಈ ನಿಲುವು ಬಹುಮುಖಿ ಆಯಾಮಗಳಿಂದ ಕೂಡಿದ್ದಾಗಿತ್ತು ಎಂಬುದು ಸಂಶಯಾತೀತವಾಗಿದೆ. ಅರಸ ಭಗವಂತನ ರಾವುತ ಹಾಗೂ ಪ್ರತಿನಿಧಿಯಾದ ಕಾರಣ ಅವನದು ಪ್ರಶ್ನಾತೀತ ವ್ಯಕ್ತಿತ್ವ ಎಂಬ ಸಂದೇಶ ಇದರಲ್ಲಿ ಅಡಕವಾಗಿತ್ತು. ಅದೇ ವೇಳೆಗೆ, ತನ್ನ ಯಾವುದೇ ಚರ್ಯೆಗೂ ತಾನು ಹೊಣೆಗಾರನಲ್ಲ, ಏಕೆಂದರೆ ತಾನು ಕೇವಲ ಪ್ರತಿನಿಧಿ, ಎಲ್ಲವೂ ನಡೆಯುತ್ತಿರುವುದು ದೇವನಿಯೋಗದಂತೆ, ಆದ್ದರಿಂದ ಎಲ್ಲದರ ಹೊಣೆಗಾರಿಕೆಯೂ ಜಗನ್ನಾಥನದು ಎಂಬ ಅರ್ಥ ಹೊರಡಿಸಬಲ್ಲ ಈ ನಿಲುವು ಅರಸನಿಗೆ ಲೌಕಿಕ ವ್ಯವಹಾರಗಳಲ್ಲಿ ಹೆಚ್ಚಿನ ಸ್ವಾತಂತ್ರ್ಯ ನೀಡಬಲ್ಲಂತದ್ದಾಗಿತ್ತು. ತಾನು ದೇವತೆಯ ಪ್ರತಿನಿಧಿ ಎಂಬ ಘೋಷಣೆಯಲ್ಲಿ ಮತ್ತೊಂದು ಪರಿಣಾಮವು ಅಂತರ್ಗತವಾಗಿತ್ತು. ಪ್ರಾತಿನಿಧ್ಯ, ಅಂದರೆ ಒಂದರ ಬದಲು ಯಾ ಒಂದರ ಸ್ಥಾನದಲ್ಲಿ ಮತ್ತೊಂದು, ಎಂಬ ತತ್ವವನ್ನು ಮುಂದಿಡುವ ಮೂಲಕ ಲೌಕಿಕ ವ್ಯವಹಾರಗಳಲ್ಲಿ ಭಿನ್ನತೆಗೆ ಒತ್ತು ನೀಡುವ ಮನೋಧರ್ಮ ದೃಢಪಡಲು ಇದು ಕಾರಣವಾಯಿತು. ಇದರಿಂದಾಗಿ ಮುಂದಿನ ದಿನಮಾನಗಳಲ್ಲಿ ದೇವಾಲಯವು ರಾಜತ್ವದ ಪ್ರತೀಕವಾಗಿ ಉಳಿಯಲಿಲ್ಲ. ಬದಲಿಗೆ, ಪ್ರಭುತ್ವ ಹಾಗೂ ದೇವಾಲಯ ಎರಡು ಭಿನ್ನ, ಆದರೆ ಪರಸ್ಪರ ನಿಕಟ ಸಂಬಂಧ ಹೊಂದಿರುವ, ಸಂಸ್ಥೆಗಳಾಗಿ ವಿಕಾಸ ಹೊಂದತೊಡಗಿದವು. ದೇವಾಲಯವು ಪರ್ಯಾಯ ಶಕ್ತಿಕೇಂದ್ರವಾಗಿ ಹಾಗೂ ಸಾರ್ವಭೌಮತ್ವದ ರಾಜ್ಯೇತರ ನೆಲೆಗಳಲ್ಲಿ ಒಂದಾಗಿ ಮಾರ್ಪಡಲು ಈ ಬಿರುಕು ಅನುವುಮಾಡಿಕೊಟ್ಟಿತು. ಅಪಾರ ಭೂಸಂಪತ್ತನ್ನು ಪಡೆದ ದೇವಾಲಯದಲ್ಲಿ ಈಗ ಭೂಸ್ವಾಮ್ಯದ ಪರಿಣಾಮದಿಂದ ಅರ್ಚಕವರ್ಗದ ಪ್ರಬಲ ಸಮುದಾಯವೊಂದು ರೂಪುಗೊಳ್ಳತೊಡಗಿತು. ಅದೇ ವೇಳೆಗೆ, ಮುಂದಿನ ಪುಟಗಳಲ್ಲಿ ಚರ್ಚಿಸಿರುವಂತೆ, ಪ್ರಭುತ್ವಾತೀತ ನೆಲೆಗಟ್ಟೊಂದನ್ನು ರೂಪಿಸಿಕೊಂಡು ದೇವಾಲಯವು ಭಾರತದ ದೊಡ್ಡ ತೀರ್ಥಾಟನಾ ಕೇಂದ್ರಗಳಲ್ಲಿ ಒಂದಾಗಿ ಏಳಿಗೆ ಪಡೆಯಿತು.

ಅನಂಗಭೀಮನ ನಂತರ ಪುರಿ ದೇವಾಲಯದ ಖ್ಯಾತಿ ಹಾಗೂ ಮಹತ್ವ ಕ್ರಮೇಣ ಬೆಳೆಯತೊಡಗಿತೆಂದು ತೋರುತ್ತದೆ. ಅವನ ಪುತ್ರನಾದ, ಕೋಣಾರ್ಕ್‌ನಲ್ಲಿ ಜಗದ್ವಿಖ್ಯಾತ ಸೂರ್ಯ ದೇವಾಲಯ ನಿರ್ಮಿಸಿದ, ಮೊದಲನೆಯ ನರಸಿಂಹನು (ಆಳ್ವಿಕೆ 1238–1264) ವೈಷ್ಣವನಾಗಿದ್ದ. ಆದರೆ ಅನಂಗಭೀಮನಂತೆ ಇವನೂ ಶಿವ ಹಾಗೂ ದುರ್ಗೆಯರನ್ನೂ ಆರಾಧಿಸುತ್ತಿದ್ದ. ಆದರೆ ಅನಂಗಭೀಮನಿಗಿಂತ ಭಿನ್ನವಾಗಿ ತನ್ನ ಕಪಿಲಾಸ್ ಶಾಸನದಲ್ಲಿ ನರಸಿಂಹನು ತನ್ನನ್ನು ಪುರುಷೋತ್ತಮ ಹಾಗೂ ದುರ್ಗೆಯರ ಪುತ್ರ ಹಾಗೂ ಶಿವನ ಭಕ್ತ ಎಂದು ಕರೆದುಕೊಂಡಿದ್ದಾನೆ. ಅಂದರೆ, ಶಿವನ ಪುತ್ರ ಇವನಲ್ಲ.[2] ಇವನು ಈ ಮೂರೂ ದೇವತೆಗಳನ್ನು ಆರಾಧಿಸುತ್ತಿರುವ ಅನೇಕ ಶಿಲ್ಪಗಳಿವೆ. ಕೋಣಾರ್ಕ್‌ನಲ್ಲಿ ಅಂಥದ್ದೊಂದನ್ನು ಕಾಣಬಹುದು.[3] ಅದರಲ್ಲಿ ಜಗನ್ನಾಥ, ದುರ್ಗೆ ಹಾಗೂ ಶಿವಲಿಂಗವನ್ನು ಪೂಜಿಸುತ್ತಿದ್ದಾನೆ ನರಸಿಂಹ. ಶಿವಲಿಂಗ ಸಣ್ಣದಾಗಿದ್ದು ಅದಕ್ಕೆ ಅಲ್ಲಿ ಹೆಚ್ಚಿನ ಮಹತ್ವ ಇಲ್ಲದಿರುವುದು ಎದ್ದುಕಾಣುತ್ತದೆ. ಇಲ್ಲಿರುವ ಜಗನ್ನಾಥನ ಶಿಲ್ಪ ಇಂದು ನಮಗೆ ಪರಿಚಿತವಾಗಿರುವ ಜಗನ್ನಾಥನನ್ನು ಬಹುಮಟ್ಟಿಗೆ ಹೋಲುತ್ತಿರುವುದು ಗಮನಾರ್ಹ.

ಅನಂಗಭೀಮ, ಮೊದಲನೆಯ ನರಸಿಂಹ ಮುಂತಾದವರು ಹದಿಮೂರನೆಯ ಶತಮಾನದಲ್ಲಿ ಈ ದೇವತೆಯನ್ನು ಪುರುಷೋತ್ತಮ ಎಂದೇ ಕರೆಯುತ್ತಿದ್ದುದ್ದೂ ಅಷ್ಟೇ

ಗಮನ ಸೆಳೆಯುವ ಸಂಗತಿಯಾಗಿದೆ. ಪುರಿಯ ದೇವತೆ ಜಗನ್ನಾಥ ಎಂದು ಕರೆಸಿಕೊಳ್ಳತೊಡಗಿದ್ದು ಯಾವಾಗ ಹಾಗೂ ಹೇಗೆ? ನಮಗೆ ದೊರೆತಿರುವ ಆಕರಗಳ ನೆರವಿನಿಂದ ಈ ಪ್ರಶ್ನೆಗೆ ಖಚಿತವಾದ ಯಾವುದೇ ಉತ್ತರ ನೀಡಲಾಗದು. ಸ್ಪಷ್ಟವಾಗಿ ಹೇಳಬಹುದಾದ್ದು ಇಷ್ಟೇ: ಕ್ರಿ.ಶ. 1309ರ ಇಮ್ಮಡಿ ಭಾನುದೇವನ ಶ್ರೀಕೂರ್ಮಮ್ ಶಾಸನದಲ್ಲಿ ಈ ಹೆಸರಿನ ಪ್ರಪ್ರಥಮ ಬಳಕೆಯನ್ನು ಕಾಣಬಹುದು.[4]

ದುರ್ಗೆ ಹಾಗೂ ಶಿವ ನರಸಿಂಹನ ಶಾಸನಗಳಲ್ಲಿ ಕಾಣಸಿಗುವರಾದರೂ ಅನಂಗಭೀಮನ ಕಾಲದಲ್ಲಿ ಪ್ರತಿಷ್ಠಾಪಿಸಲಾದದ್ದು ಹಲಿ (ಬಲಭದ್ರ), ಚಕ್ರಿ (ಕೃಷ್ಣ) ಹಾಗೂ ಸುಭದ್ರಾರ ಮೂರ್ತಿಗಳೇ ಎಂಬುದನ್ನು ಕ್ರಿ.ಶ. 1237ರ ಪುರಿಯ ಪಾತಾಳೇಶ್ವರ ದೇವಾಲಯದ ಶಾಸನ ಬಹಿರಂಗಪಡಿಸುತ್ತದೆ. ಅನಂಗಭೀಮನ ಮಗಳು (ನರಸಿಂಹನ ತಂಗಿ) ಚಂದ್ರಿಕಾದೇವಿಯು ಕ್ರಿ.ಶ. 1278ರಲ್ಲಿ ಭುಬನೇಶ್ವರದಲ್ಲಿನ ಲಿಂಗರಾಜ ದೇವಾಲಯದ ಬಳಿ ಇರುವ ಅನಂತಬಾಸುದೇಬ ದೇವಾಲಯವನ್ನು ನಿರ್ಮಿಸಿದಳು. ಈ ದೇವಾಲಯದಲ್ಲಿ ಜಗನ್ನಾಥ-ಸುಭದ್ರಾ-ಬಲಭದ್ರರ ಸಹಜಶಿಲ್ಪದ ಮೂರ್ತಿಗಳಿವೆ. ಅಲ್ಲಿನ ಶಾಸನದಲ್ಲಿ ಈ ದೇವತೆಗಳನ್ನು ಬಲದೇವ, ಕೃಷ್ಣ, ಸುಭದ್ರಾ ಎಂದು ಕರೆಯಲಾಗಿದೆ.[5]

ನರಸಿಂಹನಿಗೆ ಮತ್ತೊಂದು ಐತಿಹಾಸಿಕ ಮಹತ್ವವೂ ಇದೆ. ಗಜಪತಿ ಎಂಬ ಬಿರುದು ನಮಗೆ ಮೊಟ್ಟಮೊದಲು ಕಾಣಸಿಗುವುದು ಇವನ ಕಪಿಲಾಸ್ ಶಾಸನದಲ್ಲಿ.[6] ಆದರೆ ಸೂರ್ಯವಂಶಿ ಗಜಪತಿಗಳ ಕಾಲದವರೆಗೆ ಈ ಬಿರುದು ವಿಶಿಷ್ಟ ಮಹತ್ವವನ್ನೇನೂ ಪಡೆದಿದ್ದುದಾಗಿ ತೋರುವುದಿಲ್ಲ. ಗಂಗವಂಶದ ಇಮ್ಮಡಿ ನರಸಿಂಹ (ಆಳ್ವಿಕೆ ಸು. 1278-1308), ಇಮ್ಮಡಿ ಭಾನುದೇವ (ಆಳ್ವಿಕೆ ಸು. 1308-1327), ಮುಮ್ಮಡಿ ನರಸಿಂಹ (ಆಳ್ವಿಕೆ ಸು. 1327-1352) ಹಾಗೂ ಮುಮ್ಮಡಿ ಭಾನುದೇವರು (ಆಳ್ವಿಕೆ ಸು. 1352-1377) ವೈಷ್ಣವರಾಗಿದ್ದರು.[7] ಆದರೆ ಇವರು ಎಷ್ಟರ ಮಟ್ಟಿಗೆ ಜಗನ್ನಾಥ ದೇವಾಲಯಕ್ಕೆ ಪೋಷಣೆ ನೀಡಿದರೆಂದು ಹೇಳಲು ನಮ್ಮಲ್ಲಿ ಆಧಾರಗಳಿಲ್ಲ.

ಮುಮ್ಮಡಿ ಭಾನುದೇವನ ತರುವಾಯ ಪಟ್ಟಕ್ಕೆ ಬಂದ ನಾಲ್ವಡಿ ನರಸಿಂಹನು (ಸು.1377-1413) ಶೈವಪಂಥವನ್ನು ಒಪ್ಪಿಕೊಂಡವನಾಗಿದ್ದನು. ವೈಷ್ಣವ ಪಂಥವನ್ನು ತೊರೆದು ಶೈವನಾಗಲು ಇವನಿಗೆ ಪ್ರೇರಣೆಯಾದ ಸಂಗತಿಗಳು ಯಾವುವೆಂಬುದು ಸ್ಪಷ್ಟವಿಲ್ಲ. ಈ ವೇಳೆಗಾಗಲೇ ಪುರಿಯ ಬ್ರಾಹ್ಮಣ ಹಾಗೂ ಬ್ರಾಹ್ಮಣೇತರ ಅರ್ಚಕ ವರ್ಗದವರು ಸಾಕಷ್ಟು ಪ್ರಭಾವಶಾಲಿಯಾಗುವಲ್ಲಿ ಯಶಸ್ವಿಯಾಗಿದ್ದರಿಂದ ಅವರನ್ನು ಸದೆಬಡಿಯಲು ನಾಲ್ವಡಿ ನರಸಿಂಹನು ವೈಷ್ಣವ ಧರ್ಮಕ್ಕೆ ಪೋಷಣೆ ನೀಡದಂತಾದ ಎಂದು ಗಗನೇಂದ್ರ ನಾಥ್ ದಾಸ್ ವಾದಿಸಿದ್ದಾರೆ.[8]

ಒಡಿಶ್ಶಾದಲ್ಲಿ ಗಂಗವಂಶದ ಆಳ್ವಿಕೆಯನ್ನು ಸ್ಥಾಪಿಸಿದ ಅನಂತವರ್ಮನ್ ಚೋಡಗಂಗನು ಶೈವನಾಗಿದ್ದ. ಆದರೆ ಆ ಕಾಲಕ್ಕೆ ಭುಬನೇಶ್ವರದ ಶೈವಪಂಥಿಯರು ಪ್ರಬಲ ಶಕ್ತಿಕೇಂದ್ರವಾಗಿ ತಮ್ಮನ್ನು ರೂಪಿಸಿಕೊಂಡಿದ್ದರಿಂದ ತನ್ನ ರಾಜಕೀಯ ಹಿತಾಸಕ್ತಿಗಳಿಗೆ ಅವರು ತಡೆಯೊಡ್ಡಬಲ್ಲರೆಂಬ ಕಾರಣಕ್ಕಾಗಿ ಪರ್ಯಾಯ ಶಕ್ತಿಕೇಂದ್ರವೊಂದನ್ನು ಬೆಳೆಸುವ ದೃಷ್ಟಿಯಿಂದ ಚೋಡಗಂಗನು ಪುರಿಯ ವೈಷ್ಣವರಿಗೆ ಪೋಷಣೆ ನೀಡತೊಡಗಿರಬಹುದೆಂದು

ದಾಸ್ ಅವರು ಊಹಿಸಿದ್ದಾರೆ.[9] ಅದೇ ರೀತಿ, ವೈಷ್ಣವರು ಪ್ರಬಲರಾಗಿದ್ದ ಸಂದರ್ಭದಲ್ಲಿ ಶೈವಮತಕ್ಕೆ ಬೆಂಬಲ ನೀಡುತ್ತಾ ವೈಷ್ಣವರನ್ನು ನಿಯಂತ್ರಿಸುವ ಉದ್ದೇಶ ನಾಲ್ಕನೆ ನರಸಿಂಹನದಾಗಿರಬಹುದು ಎಂಬುದು ಇವರ ನಿಲುವಾಗಿದೆ.[10] ಇದು ನಿಜವೇ ಆಗಿದ್ದಲ್ಲಿ ಈ ಶ್ರಮವು ವಿಫಲವಾಗಿತ್ತೆಂದೇ ಹೇಳಬೇಕು. ಗಂಗವಂಶದ ಕೊನೆಯ ಅರಸನಾದ ನಾಲ್ಕನೆ ಭಾನುದೇವ (ನಿಃಶಂಕ ಭಾನುದೇವ)ನ ಬಗೆಗೆ ಮಾದಳಾ ಪಾಂಜಿಯಲ್ಲಿರುವ ವೃತ್ತಾಂತವೊಂದು ಇದನ್ನು ಸ್ಪಷ್ಟಪಡಿಸುತ್ತದೆ. ಒಮ್ಮೆ ಭಾನುದೇವನು ಜಗನ್ನಾಥ ದೇವಾಲಯಕ್ಕೆ ಬಂದಾಗ ಅವನಿಗೆ ನೀಡಲು ಪ್ರಸಾದವೇನೂ ಇಲ್ಲದೆ ಅರ್ಚಕನೊಬ್ಬನು ತನ್ನ ಮುಡಿಯಲ್ಲಿದ್ದ ದಯಣಾಪುಷ್ಪವನ್ನೇ ಪ್ರಸಾದವೆಂದು ಅವನಿಗೆ ನೀಡಿದನು. ಆದರೆ ಅದರಲ್ಲಿ ಕೂದಲೊಂದು ಸಿಲುಕಿಕೊಂಡಿತ್ತು. ಕುಪಿತನಾದ ಭಾನುದೇವನು ಈ ಕುರಿತು ಅರ್ಚಕನನ್ನು ಪ್ರಶ್ನಿಸಿ ತೃಪ್ತಿಕರವಾದ ಉತ್ತರ ದೊರಕದಿರಲು ಭಾನುದೇವನ ಆದೇಶದಂತೆ ಅವನನ್ನು ಬಂಧಿಸಲಾಯಿತು. ಅಂದು ರಾತ್ರಿ ಭಾನುದೇವನ ಕನಸಲ್ಲಿ ಪ್ರತ್ಯಕ್ಷನಾದ ಜಗನ್ನಾಥನು ನನ್ನ ಸೇವಕನಿಗೆ ತೊಂದರೆ ನೀಡದಿರು, ನಾಳೆ ಮುಂಜಾನೆ ದರ್ಶನಕ್ಕೆ ಬರುವಾಗ ನನ್ನ ತಲೆಯಲ್ಲಿರುವ ಕೂದಲನ್ನು ನೀನೇ ಕಾಣುವಿಯಂತೆ ಎಂದು ಹೇಳಿದ. ಮರುದಿನ ಮುಂಜಾನೆ ದರ್ಶನಕ್ಕೆ ಬಂದ ಭಾನುದೇವನು ಜಗನ್ನಾಥನ ತಲೆಯಲ್ಲಿ ಕಾಣಿಸಿಕೊಂಡ ಕೂದಲನ್ನು ನೋಡಿ ಬೆರಗಾಗಿ ದೇವತೆಯ ಕಾಲಲ್ಲಿ ಬಿದ್ದು ಉರುಳಿ ಕ್ಷಮೆ ಯಾಚಿಸಿ ಅರ್ಚಕನನ್ನು ಬಂಧನದಿಂದ ಮುಕ್ತಗೊಳಿಸಿದ.[11] ಅರ್ಚಕ ವರ್ಗದವರು ಹುಟ್ಟುಹಾಕಿರುವ ಈ ಕಥೆಯಲ್ಲಿ ರಾಜತ್ವದ ಪ್ರಭಾವ ಇಳಿಮುಖಗೊಳ್ಳತೊಡಗಿ ಅರ್ಚಕವರ್ಗದ ಪ್ರಭಾವ ಏರತೊಡಗಿದ್ದರ ಸೂಚನೆಯಿದೆ ಎನ್ನುತ್ತಾರೆ ದಾಸ್ ಅವರು.

ದೇವಾಲಯದ ಇತಿಹಾಸದಲ್ಲಿ ಹದಿನೈದನೆಯ ಶತಮಾನದಲ್ಲಿ ಶಾರಳಾದಾಸನೊಂದಿಗೆ ಪ್ರಾರಂಭಗೊಂಡ ವೈಷ್ಣವ ಭಕ್ತಿಯ ಅಲೆಯು ನಮಗೆ ಸಿಗುವ ಮುಂದಿನ ಪ್ರಮುಖ ಹಂತವಾಗಿದೆ. ಅರ್ಚಕ ವರ್ಗ ಹೆಚ್ಚು ಶಕ್ತಿಶಾಲಿಯಾಗತೊಡಗಿದ್ದು ಏತನ್ಮಧ್ಯೆ ನಡೆದ ಪ್ರಮುಖ ಬೆಳವಣಿಗೆಗಳಲ್ಲಿ ಒಂದಾದರೆ, ಅನಂಗಭೀಮ ಶಾರಳಾದಾಸರ ನಡುವಿನ ಮಧ್ಯಂತರದಲ್ಲಿ ಸಂಶೋಧಕರ ಗಮನವನ್ನು ಈವರೆಗೆ ಸೆಳೆಯದೆ ಉಳಿದಿರುವ ಇನ್ನೊಂದು ವಿದ್ಯಮಾನವನ್ನು ಕಾಣಬಹುದಾಗಿದೆ. ಅದುವೇ ಸ್ಥಳೀಯ ಪರಂಪರೆಯೊಂದು ಭಾರತದ ವಿಶಾಲ ಧಾರ್ಮಿಕ ಪರಂಪರೆಗಳ ಮಟ್ಟಕ್ಕೆ ಏರಿಸಲ್ಪಡತೊಡಗಿದ ಮಹಾಸಂಕ್ರಮಣ. ಇದು ಸರಳವಾದ ಪ್ರಕ್ರಿಯೆಯಾಗಿರಲಿಲ್ಲ. ಸ್ಥಳೀಯ ಇತಿಹಾಸದ ಸ್ಥಾನ, ನೆಲೆ, ಆಯಾಮಗಳನ್ನು ಕ್ರಮಬದ್ಧವಾಗಿ ಹೊರತುಪಡಿಸಿ ಜಾಗತಿಕ ಗುಣವುಳ್ಳ ಪರ್ಯಾಯ ಚರಿತ್ರೆಯೊಂದನ್ನು ಕಟ್ಟುವ ಮೂಲಕ ಇದು ಅನಾವರಣಗೊಂಡಿತು.

ಈ ಪ್ರಕ್ರಿಯೆ ಪುರಿಯ ದೇವಾಲಯಕ್ಕಷ್ಟೇ ಸೀಮಿತವಾಗಿರಲಿಲ್ಲ. ಭಾರತದ ವಿವಿಧ ಪ್ರಾಂತ್ಯಗಳಲ್ಲಿ ಹಿಂದಿನ ಕೆಲವು ಶತಮಾನಗಳಲ್ಲಿ ಏಳಿಗೆ ಪಡೆದ ಹಲವು ಧಾರ್ಮಿಕ ಕ್ಷೇತ್ರಗಳನ್ನು ಉತ್ಕೃಷ್ಟ ತೀರ್ಥಾಟನಾ ಕೇಂದ್ರಗಳೆಂದು ಗುರುತಿಸಿ ಅವುಗಳ ಮಿಥಿಕ ಚರಿತ್ರೆ ಹಾಗೂ ಮಾಹಾತ್ಮ್ಯವನ್ನು ಸಾರುವ ಕಥನಗಳು ಹದಿಮೂರು, ಹದಿನಾಲ್ಕು, ಹದಿನೈದನೆಯ ಶತಮಾನಗಳಲ್ಲಿ (ಹಾಗೂ ಒಮ್ಮೊಮ್ಮೆ ಅದರ ಬಳಿಕವೂ) ಹೇರಳವಾದ ಸಂಖ್ಯೆಯಲ್ಲಿ

ರೂಪು ಪಡೆದವು. ಅದರೊಂದಿಗೆ, ಈಗಾಗಲೇ ಉಪಖಂಡದಾದ್ಯಂತ ಖ್ಯಾತಿ ಪಡೆದಿದ್ದ ಕಾಶಿ (ವಾರಾಣಸಿ), ಗಯಾ, ಕುರುಕ್ಷೇತ್ರದಂತ ಪ್ರಮುಖ ತೀರ್ಥಾಟನಾ ಕೇಂದ್ರಗಳ ಕುರಿತೂ ಹೊಸ ಚರಿತ್ರೆ ಹಾಗೂ ಸ್ಥಳಪುರಾಣಗಳನ್ನು ಕಟ್ಟಲಾಯ್ತು. ಈ ಕಥನಗಳನ್ನು ಸಾಮಾನ್ಯವಾಗಿ ಪುರಾಣಗಳಲ್ಲಿ ಕಾಣುತ್ತೇವೆ. ಅಂಥ ಪುರಾಣಗಳಲ್ಲಿ ಸ್ಕಂದಪುರಾಣ ವಿಶೇಷ ಮಹತ್ವ ಹೊಂದಿದೆ.

ಈ ಐತಿಹಾಸಿಕ ಬೆಳವಣಿಗೆಯ ಹಿಂದೆ ಭೂಮಾಲೀಕತ್ವದಲ್ಲಿನ ಸ್ವಾಸ್ತಿ (Private property) ಹಾಗೂ ಅದನ್ನು ನಿಯಂತ್ರಿಸುವ ಸಾಂಸ್ಥಿಕ ಚೌಕಟ್ಟುಗಳು ಅಪಾರ ಪ್ರಮಾಣದಲ್ಲಿ ಚಾಲ್ತಿಗೆ ಬಂದುದ್ದನ್ನು ಕಾರಣವಾಗಿ ಗುರುತಿಸಬೇಕಿದೆ. ಅದರ ವಿಸ್ಥಿತ (reified) ಕಥನರೂಪವೇ ಇಂಥ ಸ್ಥಳಮಾಹಾತ್ಮ್ಯಗಳು. ಪ್ರತ್ಯಕ್ಷಕ್ಕೆ ಪರೋಕ್ಷದ, ಯಾ ಮಾನವ ನಿರ್ಮಿತಕ್ಕೆ ಪ್ರಕೃತಿದತ್ತದ, ಚೆಹರೆ ತೊಡಿಸುವ ವಿಸ್ಥಿತೀಕರಣ ಪ್ರಕ್ರಿಯೆಯ ಬಹುದೊಡ್ಡ ಪರಿಣಾಮಗಳಲ್ಲಿ ಒಂದು ಈ ಸ್ಥಳಪುರಾಣಗಳು.[12]

ಪುರಿ ದೇವಾಲಯ ಕುರಿತು ಹದಿಮೂರನೆಯ ಶತಮಾನದ ಹೊತ್ತಿಗಾಗಲೇ ಚಾರಿತ್ರಿಕ ಘಟನಾವಳಿಗಳನ್ನೊಳಗೊಂಡ ಕಥನಗಳ ರಚನೆ ನಡೆದಿರುವ ಸಾಧ್ಯತೆಯಿದೆ. ಅಂಥ ಕಥನಗಳು ನಮಗೆ ಲಭ್ಯವಾಗಿಲ್ಲವಾದರೂ ಹತ್ತನೆಯ ಶತಮಾನದ ಯಯಾತಿ, ಹದಿಮೂರನೆಯ ಶತಮಾನದ ಅನಂಗಭೀಮರಂತ ಅರಸುಗಳ ಕಥೆ ಹದಿನೇಳನೆಯ ಶತಮಾನದ ಮಾದಳಾಪಾಂಜಿಯಲ್ಲಿ ಅಡಕವಾಗಿರುವುದು ಅವು ಬಹುಕಾಲ ಚಲಾವಣೆಯಲ್ಲಿದ್ದುದನ್ನು ಸೂಚಿಸುತ್ತದೆ. ಆದರೆ ಇದೀಗ ನಮ್ಮಲ್ಲಿರುವ ಅತ್ಯಂತ ಹಳೆಯ ಕಥನ ಸ್ಕಂದಪುರಾಣದ 'ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯ'. ಅದರಲ್ಲಿ ಯಯಾತಿಯ ಪ್ರಸ್ತಾಪವಿಲ್ಲ. ಅನಂಗಭೀಮನೂ ಅಲ್ಲಿ ಉಲ್ಲೇಖ ಪಡೆದಿಲ್ಲ. ಈಗಿರುವ ದೇವಾಲಯವನ್ನು ಕಟ್ಟಿದ ಚೋಡಗಂಗನನ್ನೂ ಅಲ್ಲಿ ಹೆಸರಿಸಲಾಗಿಲ್ಲ. ಬದಲಿಗೆ, ಸಂಸ್ಕೃತಾಧಿಷ್ಠಿತ ಮಾರ್ಗ ಪರಂಪರೆಯೊಂದರ ಪ್ರತಿನಿಧಿಯಾದ ಇಂದ್ರದ್ಯುಮ್ನ ಎಂಬ ಅವಂತಿಯ ಕಾಲ್ಪನಿಕ ಅರಸನೊಂದಿಗೆ ದೇವಾಲಯದ ನಿರ್ಮಾಣ ಹಾಗೂ ಆಚರಣೆಗಳನ್ನು ತಳುಕು ಹಾಕಲಾಗಿದೆ. ಸ್ಥಳೀಯತೆಯ ಸೂಚನೆ ನೀಡಬಲ್ಲ ಯಾವುದೇ ವಿಚಾರವನ್ನು ಅಳವಡಿಸಿಕೊಳ್ಳದೆ ಕಥನದಾದ್ಯಂತ ಬ್ರಹ್ಮ, ವಿಷ್ಣು, ನಾರದ, ಸನಕಾದಿಗಳಿಗೆ ಒತ್ತು ನೀಡುತ್ತ ಪರ್ಯಾಯ ಜಾಗತಿಕ ವೃತ್ತಾಂತವೊಂದನ್ನು 'ಪುರುಷೋತ್ತಮಕ್ಷೇತ್ರ ಮಾಹಾತ್ಮ್ಯ'ವು ಕಟ್ಟಿಕೊಡುತ್ತದೆ.[13] ಇದರ ಮೂಲಕ ಪುರಿಯು ಭಾರತದ ಮಾರ್ಗ ಪರಂಪರೆಗೆ ಸೇರಿದ ಪ್ರಮುಖ ತೀರ್ಥಾಟನಾ ಕೇಂದ್ರವಾಗಿ ಮಾರ್ಪಾಟುಗೊಳ್ಳುತ್ತದೆ.

ಇಂದ್ರದ್ಯುಮ್ನನ ಕಥೆಯನ್ನು ಬ್ರಹ್ಮಪುರಾಣ, ನಾರದಪುರಾಣಗಳಲ್ಲಿಯೂ ಕಾಣುತ್ತೇವೆ.[14] ಸ್ಕಂದಪುರಾಣದ ಕಥೆಗಿಂತ ಈ ಎರಡು ಪುರಾಣಗಳ ಕಥನ ಅನೇಕ ವಿಚಾರಗಳಲ್ಲಿ ಭಿನ್ನವಾಗಿದ್ದರೂ ಅಲ್ಲಿಯೂ ಸ್ಥಳೀಯತೆ ಪ್ರವೇಶ ಪಡೆಯದಿರುವುದು ಎದ್ದುಕಾಣುವ ಸಂಗತಿ. ನಾರದಪುರಾಣದಲ್ಲಿ ಕಾಶಿ, ಗಯಾ, ಪ್ರಯಾಗ, ಕುರುಕ್ಷೇತ್ರಗಳಿಗಿಂತ ಹೆಚ್ಚಿನ ಪ್ರಾಮುಖ್ಯತೆ ಹಾಗೂ ಕಥನ ವಿಸ್ತಾರ ಪುರಿಗೆ ದೊರೆತಿರುವುದು ವಿಶೇಷವೇ ಸರಿ. ಪ್ರಯಾಗದ ವರ್ಣನೆ 229 ಶ್ಲೋಕಗಳಲ್ಲಿ ಹಾಗೂ ಕಾಶಿಯ ವರ್ಣನೆ 279 ಶ್ಲೋಕಗಳಲ್ಲಿ

ನಡೆದಿದ್ದರೆ ಪುರಿಯ ವರ್ಣನೆಗೆಂದು ಪುರಾಣಕಾರರು 843 ಶ್ಲೋಕಗಳನ್ನು ಮೀಸಲಿಟ್ಟಿದ್ದಾರೆ. ನಾರದಪುರಾಣವು ಪೂರ್ವಭಾರತದಲ್ಲಿ ರಚಿತವಾದ ಕಾರಣ ಅದರ ಕರ್ತೃಗಳು ಆ ಪ್ರದೇಶದ ದೇವಾಲಯವೊಂದಕ್ಕೆ ಈ ಮಹತ್ವವನ್ನು ಕಲ್ಪಿಸಿರಬಹುದೆಂದು ಗಣೇಶ್ ವಾಸುದೇವ್ ತಗರೆ ಹೇಳುತ್ತಾರೆ.[15]

ಈ ಇಂದೇ ಒಡಿಶ್ಶಾ ಹಾಗೂ ಪೂರ್ವಭಾರತಕ್ಕಷ್ಟೇ ಸೀಮಿತಗೊಂಡಿದ್ದ ಪುರಿಯ ಜಗನ್ನಾಥ ದೇವಾಲಯದ ಖ್ಯಾತಿ ಹದಿನಾಲ್ಕನೆಯ ಶತಮಾನದಿಂದ ಈಚೆಗೆ ಭಾರತಾದ್ಯಂತ ಹರಡತೊಡಗಿತು. ಪ್ರಥಮ ಹಂತದಲ್ಲಿ ದೇವಾಲಯವು ಇತರೆಡೆಗಳಲ್ಲಿ ಪ್ರಸಿದ್ಧಿ ಪಡೆಯಲು ಬೇರಾವ ಕಾರಣವನ್ನೂ ಗುರುತಿಸಲು ಸಾಧ್ಯವಿಲ್ಲದ್ದರಿಂದ ಸ್ಕಂದಪುರಾಣ ಮೊದಲುಗೊಂಡ ಪುರಾಣಗಳೇ ಅದಕ್ಕೆ ಕಾರಣವೆಂದು ಹೇಳುವ ಅನಿವಾರ್ಯತೆ ಇದೆ. ಪುರಾಣಗಳಲ್ಲಿ ಕಾಣುವ ಸ್ಥಳಮಾಹಾತ್ಮ್ಯಗಳು ಈ ದೃಷ್ಟಿಯಿಂದ ಹೆಚ್ಚು ಅರ್ಥಪೂರ್ಣವಾಗುತ್ತವೆ. ಪ್ರಸಿದ್ಧ ಕ್ಷೇತ್ರಗಳ ವರ್ಣನೆಯನ್ನು ಒಂದೆಡೆಯಲ್ಲಿ ಸಂಗ್ರಹಿಸುವುದಲ್ಲದೆ ಪುರಿಯಂತೆ ಸ್ಥಳೀಯ ಹಾಗೂ ಪ್ರಾದೇಶಿಕ ಜನಾಂಗಗಳ ನಡುವಲ್ಲಿ ಮಾತ್ರ ಹೆಸರು ಪಡೆದಿದ್ದ ದೇವಾಲಯಗಳನ್ನು ಉನ್ನತ ತೀರ್ಥಾಟನಾ ಕೇಂದ್ರಗಳಾಗಿ ಪರಿವರ್ತಿಸುವಲ್ಲಿ ಪುರಾಣಗಳು ವಹಿಸಿರುವ ಪಾತ್ರ ಅಪ್ರತಿಮವಾದ್ದು. ಈ ಯಾವ ಕೇಂದ್ರಗಳ ಖ್ಯಾತಿಯೂ ಇಂದು ಪುರಾಣಗಳ ಬಲದಲ್ಲಿ ನಿಂತಿಲ್ಲ, ನಿಜ. ಎಲ್ಲ ತೀರ್ಥಕೇಂದ್ರಗಳೂ ತಮ್ಮದೇ ಆದ ಸ್ವತಂತ್ರ ಬೆಳವಣಿಗೆಯನ್ನೂ ಅಸ್ತಿತ್ವವನ್ನೂ ಪಡೆದುಕೊಂಡು ಪುರಾಣಗಳ ಚೌಕಟ್ಟು ಹಾಗೂ ಪ್ರಭಾವ ಮೀರಿ ಬೆಳೆದಿವೆ. ಆದರೆ ಪುರಾಣಗಳಲ್ಲಿ ಇವುಗಳ ಮಾಹಾತ್ಮ್ಯಗಳು ಅಡಕವಾಗಿರದಿದ್ದರೆ ಈ ಬೆಳವಣಿಗೆ ಚಾಲನೆ ಪಡೆದುಕೊಳ್ಳುವುದು ಕಷ್ಟಕರವಾಗಿತ್ತೆಂದು ಹೇಳಬೇಕು.

ಹೀಗೆ ಅನಂತವರ್ಮನು ಕಟ್ಟಿದ ದೇವಾಲಯ ಹಾಗೂ ಅನಂಗಭೀಮನು ಸ್ಥಾಪಿಸಿದ ದಾರುಮೂರ್ತಿಗಳು ಅವರನ್ನು ಸ್ಮರಿಸದೆಯೇ ಆಸೇತುಹಿಮಾಚಲ ಸಂಸ್ಕೃತಭಾಷೆ ಬಲ್ಲ ಶಿಷ್ಟವರ್ಗಗಳ ನಡುವಲ್ಲಿ ಪ್ರಚಲಿತವಾಗುತ್ತಿದ್ದ ಸಂದರ್ಭದಲ್ಲಿ ಪುರಿ ದೇವಾಲಯದ ಇತಿಹಾಸ ಹೊಸದೊಂದು ತಿರುವು ಪಡೆದುಕೊಳ್ಳತೊಡಗಿತು. ವೈಷ್ಣವ ಭಕ್ತಿ ಪರಂಪರೆಯ ಈ ತಿರುವು ಶಾರಳಾದಾಸನೊಂದಿಗೆ ಪ್ರಾರಂಭವಾಗುತ್ತದೆ.

ಶಾರಳಾದಾಸನು ಒಡಿಯಾ ಭಾಷೆಯ ಪಂಪ. ಅವನನ್ನು ಆ ಭಾಷೆಯ ಆದಿಕವಿ ಎಂದು ಪರಿಗಣಿಸಲಾಗುತ್ತದೆ. ಪಂಪನಿಗಿಂತ ಹಿಂದೆ ಕನ್ನಡದಲ್ಲಿ ಕಾವ್ಯವಿತ್ತಷ್ಟೇ? ಒಂಬತ್ತನೆಯ ಶತಮಾನದ ಕವಿರಾಜಮಾರ್ಗ ಎಂಬ ಲಕ್ಷಣಗ್ರಂಥವೇ ಅದಕ್ಕೆ ಸಾಕ್ಷಿ. ಅಂತೆಯೇ ಶಾರಳನಿಗಿಂತ ಹಿಂದೆಯೂ ಒಡಿಯಾದಲ್ಲಿ ಕೇಶಬ ಕೋಇಲಿ ಮೊದಲಾದ ಕೆಲವು ಜನಪ್ರಿಯ ಕಾವ್ಯಗಳ ರಚನೆ ನಡೆದಿತ್ತಾದರೂ ಪ್ರಥಮ ಬಾರಿಗೆ ಬೃಹತ್ ಪ್ರಮಾಣದಲ್ಲಿ ಕೃತಿಯೊಂದನ್ನು ಒಡಿಯಾದಲ್ಲಿ ರಚಿಸಿದ ಹೆಗ್ಗಳಿಕೆ ಇವನದಾಗಿದೆ. ಶೂದ್ರಜಾತಿಯೊಂದಕ್ಕೆ ಸೇರದ ಇವನು ಒಡಿಯಾದ ಕುಮಾರವ್ಯಾಸನೂ ಹೌದು. ಸಂಸ್ಕೃತದ ಮಹಾಭಾರತವನ್ನು ಒಡಿಯಾಗೆ ತಂದ ಕೀರ್ತಿ ಇವನಿಗೆ ಸಲ್ಲುತ್ತದೆ. ವರ್ಚಸ್ಸಿನಲ್ಲಿ, ಕಾವ್ಯದ ಸಿರಿವಂತಿಕೆಯಲ್ಲಿ ಶಾರಳನು ಕುಮಾರವ್ಯಾಸನಿಗೆ ಸಾಟಿ ನಿಲ್ಲುವನಾದರೂ ಇವನಲ್ಲಿ ಗ್ರಾಮ್ಯತೆಯ ಸೊಬಗು

ಹಾಗೂ ಸ್ಥಳೀಯ ಪರಂಪರೆಗಳ ಪ್ರಭಾವ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ಒಡಿಯಾ ಭಾಷೆಯ ಪ್ರಮುಖ ಮೈಲಿಗಲ್ಲುಗಳಲ್ಲಿ ಒಂದು ಇವನ ಮಹಾಭಾರತ.

ಶಾರಳಾದಾಸ ಗಂಗವಂಶದ ಆಳ್ವಿಕೆ ಕೊನೆಗೊಳಿಸಿ ಸೂರ್ಯವಂಶಿ ಗಜಪತಿಗಳ ರಾಜ್ಯ ಸ್ಥಾಪಿಸಿದ ಕಪಿಲೇಂದ್ರನ (ಆಳ್ವಿಕೆ ಕ್ರಿ.ಶ. 1434-1466) ಸಮಕಾಲೀನನಾಗಿದ್ದ. ತನ್ನ ಮಹಾಭಾರತದಲ್ಲಿ ಇವನು ಜಗನ್ನಾಥ ದೇವಾಲಯದ ವೃತ್ತಾಂತವನ್ನು ಸವಿಸ್ತಾರ ಹೇಳಿರುವುದು ವಿಶಿಷ್ಟವಾಗಿದೆ. ಈ ವೃತ್ತಾಂತದಲ್ಲಿ ಶಾರಳನು ಇಂದ್ರದ್ಯುಮ್ನನ ಕಥೆಯನ್ನು ತನ್ನದೇ ಆದ ರೀತಿಯಲ್ಲಿ ಅಳವಡಿಸಿಕೊಂಡಿದ್ದಾನೆ. ತನ್ಮೂಲಕ ಮಾರ್ಗ ಪರಂಪರೆಯ ಸಂಜ್ಞೆ, ಸೂಚಕಗಳನ್ನು ದೇಶಿಗೊಳಿಸಿ ಹೊಸ ಭಾವಪ್ರಪಂಚವೊಂದನ್ನು ಸೃಷ್ಟಿಸಿದ್ದಾನೆ.

ಪುರಾಣಗಳಲ್ಲಿ ಕಾಣುವ ಇಂದ್ರದ್ಯುಮ್ನನ ಕಥೆಯಲ್ಲಿ ವೃಕ್ಷವೊಂದು ಪುರಿಯ ಕಡಲಲ್ಲಿ ಪ್ರತ್ಯಕ್ಷಗೊಂಡಿತೆಂದು ಹೇಳಿರುವುದನ್ನು ಈಗಾಗಲೇ ಚರ್ಚಿಸಿದ್ದೇವೆ. ಈ ವೃಕ್ಷವನ್ನು ಶಾರಳನು ಕೃಷ್ಣನ ಮೃತದೇಹದೊಂದಿಗೆ ಸಮೀಕರಿಸಿರುವುದು ವಿಶಿಷ್ಟವಾಗಿದ್ದು ಅವನ ಕ್ರಿಯಾತ್ಮಕತೆಗೆ ಕನ್ನಡಿ ಹಿಡಿದಂತಿದೆ. ವರ್ಣನೆಯ ಧಾಟಿ ಸರಳವಾಗಿದ್ದರೂ ಇದೊಂದು ವಿಸ್ಮಯಕರ ಕಥನವೇ ಸರಿ. ಪುರಿಯಲ್ಲಿ ಕಾಣುವ ಮರದ ಮೂರ್ತಿ ಬೇರೇನೂ ಅಲ್ಲ, ಶ್ರೀಕೃಷ್ಣಪರಮಾತ್ಮನ ಮೃತದೇಹವೇ ಆಗಿದೆ ಎಂಬುದು ಶಾರಳನ ಹೇಳಿಕೆ. ಇದು ಹಲವು ದ್ವಂದ್ವಾರ್ಥಗಳನ್ನೂ, ಧ್ವನ್ಯಾರ್ಥಗಳನ್ನೂ ಹೊರಡಿಸಬಲ್ಲ ಕಾವ್ಯಪ್ರತಿಮೆ. ಅದನ್ನು ಅರ್ಥೈಸಿಕೊಳ್ಳುವ ಸಾಧ್ಯತೆಗಳು ಅಪಾರ. ಒಟ್ಟು ಕಾವ್ಯವನ್ನು ಓದಿದಾಗ ಈ ಪ್ರತಿಮೆಯನ್ನು ಯಾವುದೇ ನಿರ್ದಿಷ್ಟ ಅರ್ಥದ ಸುತ್ತ ತಿರುಗಾಟಕ್ಕೊಡ್ಡದೆ ಅದರ ಅನಂತ ಸಾಧ್ಯತೆಗಳನ್ನು ಬಿಚ್ಚಿಡುವುದೇ ಶಾರಳನ ಉದ್ದೇಶವಾಗಿತ್ತೆಂದು ತೋರುತ್ತದೆ. ಪುರಿ ಪರಂಪರೆಯ ಒಟ್ಟು ಕಥಾನಕಗಳಿಗೆ ಇದು ನವೀನ ತಿರುವೊಂದನ್ನು ನೀಡಿತು ಎಂಬುದರಲ್ಲಿ ಸಂಶಯವಿಲ್ಲ. ಹಿಂದೆ ಪುರಾಣಗಳು ಮಾಡಿದಂತೆ, ಆದರೆ ಅದಕ್ಕೆ ವಿಪರೀತವಾಗಿ, ಸ್ಥಳೀಯತೆಗೆ ಮುಂಗಣನೆ ನೀಡುವ ಪರ್ಯಾಯ ಕಥನವೊಂದನ್ನು ಇಲ್ಲಿ ಹೆಣೆದಿದ್ದಾನೆ ಶಾರಳ. ಅದು ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಜಗನ್ನಾಥ ಪರಂಪರೆಯ ಮೇಲೆ ಪ್ರಭಾವ ಬೀರಿತೆಂದು ಮುಂದಿನ ಒಂದು ಶತಮಾನದ ಇತಿಹಾಸವು ಒತ್ತಿಹೇಳುತ್ತದೆ.

ಕಥೆ ಹೀಗಿದೆ. ಮಹಾಭಾರತ ಯುದ್ಧದ ಬಳಿಕ ದ್ವಾರಕೆಯಲ್ಲಿ ಶಬರನೊಬ್ಬನ ಅಂಬು ನಾಟಿ ಮರಣ ಹೊಂದಿದ ಕೃಷ್ಣನ ದೇಹವನ್ನು ಚಿತೆಯಮೇಲೆ ಏರಿಸಿಲಾಯಿತು. ಆದರೆ ದೇಹವು ಸುಟ್ಟು ಭಸ್ಮವಾಗದೆ ಹಾಗೆಯೇ ಉಳಿಯಿತು. ಒಡಲು ಹಾಗೂ ತಲೆಯ ಹೊರಗೆ ಚಾಚಿಕೊಂಡಿದ್ದ ಕೈ, ಕಾಲು, ಕಿವಿ, ಮೂಗು ಮಾತ್ರ ಸುಟ್ಟಿತ್ತು. ಆಗ ಬೇರೆ ಮಾರ್ಗವಿಲ್ಲದೆ ಸುಡಲೊಲ್ಲದ ದೇಹವನ್ನು ಸಾಗರದಲ್ಲಿ ತೇಲಿಬಿಡಲಾಯ್ತು. ದ್ವಾರಕಾದಿಂದ ತೇಲುತ್ತ ತೇಲುತ್ತ ಪುರಿ ತಲುಪಿದ ದೇಹವನ್ನು ಅಲ್ಲಿದ್ದ ಶಬರರು ತಮ್ಮ ವಶದಲ್ಲಿಟ್ಟುಕೊಂಡರು. ಬಹುಕಾಲ ಹಾಗೆಯೇ ಇದ್ದ ಕೃಷ್ಣನ ದೇಹವು ಅದ್ಭುತಕರವಾದ ರೀತಿಯಲ್ಲಿ ಮರದ ತುಂಡಾಗಿ ಪರಿವರ್ತನೆ ಹೊಂದಿತು! ಇಂದ್ರದ್ಯುಮ್ನನು ಪುರಿಗೆ ಆಗಮಿಸಿದಾಗ ಅದು ರೋಹಿಣೀಕುಂಡದಲ್ಲಿತ್ತು. ಅವನು ಅದನ್ನು ಎತ್ತಲು ಪ್ರಯತ್ನಿಸಿ ವಿಫಲನಾದನೆಂದು ಶಾರಳ ಹೇಳುತ್ತಾನೆ. ಕೊನೆಗೆ ಇಂದ್ರದ್ಯುಮ್ನನ ಕನಸಲ್ಲಿ ಬಂದ ಜಗನ್ನಾಥ ಆ ವೃಕ್ಷವನ್ನು

ಜಾರ ಎಂಬ ಶಬರ ಮತ್ತು ಬಸು ಎಂಬ ಬ್ರಾಹ್ಮಣ. ಇವರಿಬ್ಬರಿಂದ ಮಾತ್ರ ಎತ್ತಲು ಸಾಧ್ಯ ಎಂದು ಹೇಳಿದನಂತೆ. ಅದರಂತೆ ಜಾರಶಬರ, ಬಸುಬ್ರಾಹ್ಮಣರನ್ನು ಕರೆಯಲಾಯ್ತು. ಜಾರನು ಯಾವುದೇ ಶ್ರಮವಿಲ್ಲದೆ ಹಾಗೂ ಬಸು ಸಾಕಷ್ಟು ಶ್ರಮವಹಿಸಿ ವೃಕ್ಷವನ್ನು ಕುಂಡದಿಂದ ಹೊರತೆಗೆಯುತ್ತಾರೆ. ಬಳಿಕ ಆ ವೃಕ್ಷದಿಂದ ಬುದ್ಧನ ಮೂರ್ತಿಯನ್ನು ನಿರ್ಮಿಸಲಾಗುತ್ತದೆ.[16]

ಈ ಕಥೆಯಲ್ಲಿನ ವೈಷಮ್ಯಗಳು, ತಿರುವುಗಳು, ದ್ವಂದ್ವಗಳೆಲ್ಲವೂ ಅಪ್ರತಿಮವಾದ್ದು. ಕೃಷ್ಣನ ಸಾವಿಗೆ ಶಬರನೊಬ್ಬ ಕಾರಣಕರ್ತನಾಗಿದ್ದಾನೆ. ಆದರೆ ಮರಣಹೊಂದಿದ ಕೃಷ್ಣನ ದೇಹವನ್ನು ಪುರಿಯಲ್ಲಿ ಶಬರರು ತಮ್ಮ ವಶದಲ್ಲಿಟ್ಟುಕೊಂಡು ಅನೇಕಕಾಲ ಕಾಯುತ್ತಾರೆ! ಬಳಿಕ ಮರವಾಗಿಹೋದ ದೇಹವನ್ನು ಮೇಲಕ್ಕೆತ್ತುವ ಶಕ್ತಿ ಮತ್ತಾರಿಗೂ ಇಲ್ಲ, ಓರ್ವ ಶಬರ ಹಾಗೂ ಓರ್ವ ಬ್ರಾಹ್ಮಣನಿಗೆ ಮಾತ್ರ. ಅದರಲ್ಲೂ ಶಬರನಿಗೆ ಮಾತ್ರ ಅದನ್ನು ಗೊಂದಲವಿಲ್ಲದೆ ಎತ್ತುವ ಸಾಮರ್ಥ್ಯ. ಬ್ರಾಹ್ಮಣ ಅತ್ಯಂತ ಕಾಯಶ್ರಮದಿಂದ ಮಾತ್ರ ಅದನ್ನು ಎತ್ತಬಲ್ಲ. ದಾಸ್ ಅವರ ಅಭಿಪ್ರಾಯದಲ್ಲಿ ಈ ಕಥೆ ಪುರಿಯ ಅರ್ಚಕವರ್ಗದ ಪ್ರಭಾವ ಹೆಚ್ಚತೊಡಗಿದ್ದರ ಸೂಚನೆಯಾಗಿದೆ. ಮಾತ್ರವಲ್ಲ, ಬ್ರಾಹ್ಮಣ ಅರ್ಚಕರಿಗಿಂತ ಬ್ರಾಹಣೇತರ (ದೈತ) ಅರ್ಚಕರು ಪುರಿ ದೇವಾಲಯದ ಮೇಲೆ ಹೆಚ್ಚಿನ ನಿಯಂತ್ರಣ ಸಾಧಿಸತೊಡಗಿದ್ದುದನ್ನು ಜಾರ ಶ್ರಮರಹಿತವಾಗಿ ಹಾಗೂ ಬಸು ಪರಿಶ್ರಮದೊಂದಿಗೆ ವೃಕ್ಷವನ್ನು ತೆಗೆದ ವೃತ್ತಾಂತವು ಎತ್ತಿಹಿಡಿಯುತ್ತದೆ ಎಂದು ಇವರು ಹೇಳಿದ್ದಾರೆ.[17]

ಶಾರಳಾದಾಸನ ಕಥನದಲ್ಲಿ ಗಮನ ವಹಿಸಬೇಕಾದ್ದು ವೃಕ್ಷದಿಂದ ಬುದ್ಧನ ಮೂರ್ತಿಯನ್ನು ಕೆತ್ತಲಾಯ್ತು ಎಂಬ ಸಂಗತಿ. ಜಗನ್ನಾಥ ಧರ್ಮವು ಈ ಮೂಲಕ ಹೊಸದೊಂದು ಆಯಾಮವನ್ನು ಪಡೆದುಕೊಂಡಿತು. ಜಗನ್ನಾಥ ಧರ್ಮ ವೈಷ್ಣವಮೂಲದ್ದು. ವೈಷ್ಣವ ಪರಂಪರೆಯಲ್ಲಿ ಬುದ್ಧ ಈಗಾಗಲೇ ವಿಷ್ಣುವಿನ ಅವತಾರವೆಂದು ಮನ್ನಣೆ ಪಡೆದಿದ್ದ. ಹನ್ನೆರಡನೆಯ ಶತಮಾನದಲ್ಲಿ ಜಯದೇವನು ರಚಿಸಿದ *ಗೀತಗೋವಿಂದ* ಕಾವ್ಯದಲ್ಲಿ ಬುದ್ಧನನ್ನು ಕೃಷ್ಣನ ಒಂಬತ್ತನೆಯ ಅವತಾರವೆಂದು ಹೆಸರಿಸಲಾಗಿತ್ತು.[18]

**ನಿಂದತಿ ಯಜ್ಞವಿಧೇರಹಹ ಶೃತಿಜಾತಂ**
**ಸದಯ ಹೃದಯ ದರ್ಶಿತ ಪಶುಘಾತಂ**
**ಕೇಶವ ಧೃತ ಬುದ್ಧಶರೀರ ಜಯಜಗದೀಶ ಹರೇ**[19]

ಸಂಸ್ಕೃತ *ಭಾಗವತಪುರಾಣ*ದಲ್ಲಿಯೂ ಬುದ್ಧನನ್ನು ವಿಷ್ಣುವಿನ ಅವತಾರವೆಂದು ಗುರುತಿಸಲಾಗಿದೆ.[20] ಆದಾಗ್ಯೂ ಈ ಹಿಂದೆ ಬೌದ್ಧಧರ್ಮದ ಯಾವುದೇ ಪ್ರೇರಣೆಯಾಗಲಿ ಪ್ರಭಾವವಾಗಲಿ ಜಗನ್ನಾಥ ಪರಂಪರೆಯಲ್ಲಿ ಕಂಡುಬಂದಿರಲಿಲ್ಲ. ಶಾರಳಾದಾಸನ ಕಥನದೊಂದಿಗೆ ಈ ಪರಂಪರೆಯಲ್ಲಿ ಬುದ್ಧನ ಪ್ರವೇಶವಾಗಿ ಅವನ ಬಹುದೊಡ್ಡ ನೆರಳು ಕಂಡುಬರತೊಡಗುತ್ತದೆ.

ತನ್ನ *ಮಹಾಭಾರತ*ದಲ್ಲಿ ಶಾರಳನು ಅನೇಕ ಸಲ ಜಗನ್ನಾಥನನ್ನು ಬುದ್ಧನೊಂದಿಗೆ ಸಮೀಕರಣ ಮಾಡಿ ತೋರಿಸಿದ್ದಾನೆ. ಒಂದೆಡೆಯಲ್ಲಿ ಮಹೋದಧಿಯ ತೀರದಲ್ಲಿರುವ ದೇವುಳವಲ್ಲಿದ್ದು ದರಿದ್ರರ ದುಃಖವನ್ನು ಧ್ವಂಸಗೊಳಿಸುವವನು ಕಲಿಯುಗದಲ್ಲಿ ಬುದ್ಧರೂಪ

ತಾಳಿ ಪಾಪಿಜನರನ್ನು ಉದ್ಧರಿಸುವನು ಎಂದಿದ್ದಾನೆ.[21] ಮತ್ತೊಂದೆಡೆಯಲ್ಲಿ ಕಲಿಯುಗದಲ್ಲಿ ಇರಲು ಇಚ್ಛೆಯಾಗಿ ಬುದ್ಧನ ಅವತಾರ ತಾಳಿಬಂದನೆಂದು ಹೇಳಿದ್ದಾನೆ.[22] ದ್ವಾಪರಯುಗದ ಬಳಿಕ ಜಗನ್ನಾಥನು ಬೌದ್ಧರೂಪ ಪಡೆಯುತ್ತಾನೆಂದು ಇವನ ನಂಬಿಕೆ.[23] ಸಂಸಾರಿಗಳನ್ನು ಪಾರುಗೊಳಿಸಲು ಜಗನ್ನಾಥನು ಬುದ್ಧರೂಪ ಪಡೆದಿದ್ದಾನೆ.[24] ಬುದ್ಧರೂಪದಲ್ಲಿ ಶಾರಳನು ಜಗನ್ನಾಥ, ಬಲಭದ್ರ, ಸುಭದ್ರಾ, ಈ ಮೂವರ ರೂಪವನ್ನೂ ಕಾಣುತ್ತಾನೆ.[25]

ಶಾರಳನ ಮುಖಾಂತರ ಜಗನ್ನಾಥ ಪರಂಪರೆಗೆ ಬೌದ್ಧಧರ್ಮದ ಚೆಹರೆ ಒದಗಿಬರುತ್ತಿದ್ದ ಸಂದರ್ಭದಲ್ಲಿಯೇ ಪುರಿ ದೇವಾಲಯದ ಆಚರಣೆಗಳಲ್ಲಿ ಬದಲಾವಣೆಗಳು ಗೋಚರಿಸತೊಡಗಿದವು. ಇದಕ್ಕೆ ಕಾರಣಕರ್ತರು ಸೂರ್ಯವಂಶಿ ಗಜಪತಿ ಅರಸರು. ಸೂರ್ಯವಂಶಿ ರಾಜ್ಯ 1434ರಲ್ಲಿ ಸ್ಥಾಪಿತವಾಯ್ತು.[26] ಅದರ ಸ್ಥಾಪಕ ಕಪಿಲೇಂದ್ರನ ಕುರಿತು ಮಾದಳಾಪಾಂಜಿ ಕಥೆಯೊಂದನ್ನು ಹೇಳುತ್ತದೆ. ಅದರಂತೆ, ಗಂಗವಂಶದ ಕೊನೆಯ ಅರಸನಿಗೆ ಮಕ್ಕಳಿರಲಿಲ್ಲ. ತನ್ನ ಬಳಿಕ ರಾಜ್ಯ ನಡೆಸುವವರು ಯಾರೆಂದು ಚಿಂತಿತನಾಗಿ ಜಗನ್ನಾಥನನ್ನು ಪ್ರಾರ್ಥಿಸಿದ ಅವನಿಗೆ ಒಂದು ದಿನ ಜಗನ್ನಾಥ ಕನಸಿನಲ್ಲಿ ಬಂದು ನಾಳೆದಿನ ಬಿಮಳಾಮಾತೆಯ ಮಂದಿರದೆದುರು ನಿನಗೋರ್ವ ಭಿಕ್ಷುಕಹುಡುಗ ಕಾಣಸಿಗುತ್ತಾನೆ. ಅವನೇ ನಿನ್ನ ಉತ್ತರಾಧಿಕಾರಿ ಎಂದು ಸೂಚಿಸುತ್ತಾನೆ. ಅಂತೆಯೇ ಮರುದಿನ ಅರಸನಿಗೆ ಬಿಮಳಾಮಂದಿರದೆದುರು ಕಪಿಳಿ ರಾವುತ ಎಂಬ ಹುಡುಗನೊಬ್ಬ ಸಿಗುತ್ತಾನೆ. ಮೊದಲು ದನ ಕಾಯುವವನೂ ಬಳಿಕ ಕಳ್ಳನೂ ಆಗಿದ್ದು ಈಗ ದೇವಾಲಯದ ಪ್ರಾಂಗಣದಲ್ಲಿ ಭಿಕ್ಷುಕನಾಗಿದ್ದ ಇವನನ್ನು ಅರಸ ದತ್ತು ತೆಗೆದುಕೊಳ್ಳುತ್ತಾನೆ. ಇವನೇ ಸೂರ್ಯವಂಶಿ ರಾಜ್ಯದ ಸ್ಥಾಪಕ ಕಪಿಲೇಂದ್ರದೇವ.[27]

ಈ ಕಥೆಯನ್ನು ಐತಿಹಾಸಿಕ ಸತ್ಯ ಎಂದು ನಂಬಬೇಕಿಲ್ಲ. ದಾಸ್ ಅವರ ಪ್ರಕಾರ ಅರ್ಚಕವರ್ಗದ ಕಥನವಾದ ಮಾದಳಾಪಾಂಜಿಯಲ್ಲಿ ತಮ್ಮ ದೇವತೆಯ ಮಹಿಮೆಯನ್ನು ಕೊಂಡಾಡುವ ಉದ್ದೇಶದಿಂದ ಕಪಿಲೇಂದ್ರನ ಗತಕಾಲವನ್ನು ಈ ರೀತಿ ಚಿತ್ರಿಸಲಾಗಿದೆ. ಜಗನ್ನಾಥನೊಲಿದರೆ ಭಿಕ್ಷುಕನೂ ಚಕ್ರವರ್ತಿಯಾಗಬಲ್ಲ ಎಂಬ ಸಂದೇಶ ಇದರಲ್ಲಿದೆ ಎನ್ನುತ್ತಾರೆ ದಾಸ್.[28] *ಗಂಗವಂಶಾನುಚರಿತ*, *ಭಕ್ತಿ ಭಾಗವತ* ಮೊದಲಾದ ಕೃತಿಗಳಲ್ಲಿ ಕಪಿಲೇಂದ್ರನು ಗಂಗರನ್ನು ಪರಾಭವಗೊಳಿಸಿ ರಾಜ್ಯವನ್ನು ತನ್ನದಾಗಿಸಿಕೊಂಡನೆಂಬ ಉಲ್ಲೇಖ ಕಂಡುಬರುತ್ತದೆ.[29] ರಘುದೇವನ ರಘುದೇವಪುರ ಶಾಸನವು ಇದನ್ನು ಪರೋಕ್ಷವಾಗಿ ಸಮರ್ಥಿಸುತ್ತದೆ. ಅಲ್ಲಿ ಕಪಿಲೇಂದ್ರನ ಅಜ್ಜನನ್ನು ರಾವುತ ಮತ್ತು ನೃಪ ಎಂದು ಕರೆಯಲಾಗಿದೆ. ಇದು ಕಪಿಲೇಂದ್ರ ಸ್ಥಳೀಯ ಸ್ತರದಲ್ಲಿಯಾದರೂ ಪ್ರಭಾವಶಾಲಿಯಾಗಿದ್ದ ಮನೆತನವೊಂದಕ್ಕೆ ಸೇರಿದವನಾಗಿದ್ದನೇ ಹೊರತು ಭಿಕ್ಷುಕ ಅಥವಾ ದನ ಕಾಯುವವನಾಗಿರಲಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ.[30] ಇದನ್ನೇ ರಘುದೇವನ ವಾರಂಗಲ್ ಶಾಸನವೂ ಸೂಚಿಸುತ್ತದೆ. ಅಲ್ಲಿ ಕಪಿಲೇಂದ್ರನ ತಂದೆ ಜಾಗೇಶ್ವರನನ್ನು ಮಹಾರಾಯ, ನೃಪ ಮೊದಲಾದ ಸಂಜ್ಞೆಗಳಿಂದ ಗುರುತಿಸಲಾಗಿದೆ.[31]

ಸೂರ್ಯವಂಶಿ ಗಜಪತಿಗಳ ಆಳ್ವಿಕೆಯೊಂದಿಗೆ ಪ್ರಭುತ್ವ-ದೇವಾಲಯ ನಡುವಣ ಸಂಬಂಧ ಹೊಸದೊಂದು ತಿರುವನ್ನು ಪಡೆದುಕೊಳ್ಳುತ್ತದೆ. ಹದಿಮೂರನೆಯ ಶತಮಾನದಲ್ಲಿ

ದೇವಾಲಯದಲ್ಲಿ ಪರಿಷ್ಕರಣೆಗಳನ್ನು ತಂದ ಅನಂಗಭೀಮನು ತನ್ನ ರಾಜ್ಯವನ್ನು ಜಗನ್ನಾಥನಿಗೆ ಸಮರ್ಪಿಸಿ ಅವನ ರಾವುತ, ಮತ್ತು ಪುತ್ರನಾಗಿ ರಾಜ್ಯಭಾರ ನಡೆಸುತ್ತಿರುವುದಾಗಿ ಹೇಳಿಕೊಂಡಿದ್ದ. ಇದೇ ಆಶಯವನ್ನು ಸೂರ್ಯವಂಶಿಗಳು ತಮ್ಮದಾಗಿಸಿಕೊಂಡರು. ಅಲ್ಲದೆ ಶಾಸನಗಳಲ್ಲಿ ಕಾಣುವ ಅರಸನ ಮಾತಿನ ಧಾಟಿ ಈಗ ಬದಲಾಗತೊಡಗಿತು. ಉದಾಹರಣೆಗೆ, 1464ರಲ್ಲಿ ಪುರಿಯಲ್ಲಿ ಹೊರಡಿಸಲಾದ ಶಾಸನವೊಂದರಲ್ಲಿ ಕಪಿಲೇಂದ್ರನು ಜಗನ್ನಾಥಾ, ನನಗೆ ದ್ರೋಹ ಬಗೆದ ಎಲ್ಲರನ್ನೂ ನಾನು ಶಿಕ್ಷಿಸಲು ಹೊರಟಿದ್ದೇನೆ, ನಾನು ಮಾಡುತ್ತಿರುವುದು ಸರಿಯೋ ತಪ್ಪೋ ಎಂದು ನೀನೇ ನಿರ್ಧರಿಸು ಎಂದು ಹೇಳಿದ್ದಾನೆ. ಕುಲ್ಕ ಅವರ ಪ್ರಕಾರ ಒಡಿಶ್ಶಾದ ಶಾಸನದಲ್ಲಿ ದೇವತೆಯೊಂದಿಗೆ ಅರಸನೊಬ್ಬ ನೇರ ಮಾತನಾಡುವ ಮೊಟ್ಟಮೊದಲ ಪ್ರಸಂಗ ಇದಾಗಿದೆ.[32] ಅಲ್ಲದೆ ಈ ಶಾಸನದಲ್ಲಿ ಕಪಿಲೇಂದ್ರ ತನ್ನನ್ನು ಜಗನ್ನಾಥನ ಸೇವಕ ಎಂದು ಕರೆದುಕೊಂಡಿರುವುದನ್ನೂ ಕುಲ್ಕ ಎತ್ತಿ ತೋರಿಸಿದ್ದಾರೆ. ಕಪಿಲೇಂದ್ರನ ಕಾಲದಿಂದಾಚೆಗೆ ಅರಸನು ಜಗನ್ನಾಥನ ಸೇವಕ ಎಂಬ ಆಶಯ ಪ್ರಬಲಗೊಳ್ಳುತ್ತಾ ಹೋಗಿ ಮುಂದೆ ಗಜಪತಿ ಅರಸನೇ ಜಗನ್ನಾಥನ ಆದ್ಯಸೇವಕ (ಮೊದಲ ಸೇವಕ) ಎಂಬ ವ್ಯವಸ್ಥೆ ಜಾರಿಗೊಳ್ಳಲು ಕಾರಣವಾಯ್ತು.

ಅನಂಗಭೀಮನಂತೆ ಸೂರ್ಯವಂಶಿಗಳೂ ಜಗನ್ನಾಥನ ರಾವುತರಾಗಿಯೇ ಕಾರ್ಯ ನೆರವೇರಿಸಿ ಈ ಆಶಯಕ್ಕೆ ಹಿಂದಿಗಿಂತ ಹೆಚ್ಚಿನ ಪ್ರಚಾರ ನೀಡಿ ಅದನ್ನೊಂದು ಆಡಳಿತ ಸಂಹಿತಯಂತೆ ಪಾಲಿಸಿದರಾದರೂ ದೇವಾಲಯದೊಂದಿಗಿನ ಅವರ ಸಂಬಂಧ ಈಗ ಭಿನ್ನವಾಗಿತ್ತು. ಚೋಡಗಂಗನ ಕಾಲಕ್ಕೆ ಪ್ರಭುತ್ವದ ಅಭಿವ್ಯಕ್ತಿಯಾಗಿದ್ದ ದೇವಾಲಯವು ಅನಂಗಭೀಮನ ಕಾಲದಿಂದ ಸ್ವತಂತ್ರ ಸಂಸ್ಥೆಯಾಗಿ ಪ್ರಭುತ್ವವೆಂಬ ಮತ್ತೊಂದು ಸಂಸ್ಥೆಯ ಜೊತೆ ಅದು ಸಂಬಂಧ ಬೆಳೆಸಿಕೊಳ್ಳುವ ಹೊಸ ವಿದ್ಯಮಾನ ತಲೆದೋರತೊಡಗಿತು. ಒಂದಾಗಿದ್ದ ಸಂಸ್ಥೆ ಎರಡಾಗಿ ಮಾರ್ಪಟ್ಟಿತು. ಈ ಪರಿಕಲ್ಪನೆ ಸೂರ್ಯವಂಶಿಗಳ ಕಾಲದಲ್ಲಿ ಇನ್ನಷ್ಟು ಆಳ ಪಡೆದುಕೊಂಡಿತು. ತನ್ನ ನಿರ್ಣಯ ಸರಿಯೇ ತಪ್ಪೇ ಎಂದು ಜಗನ್ನಾಥನೇ ನಿರ್ಧರಿಸಲಿ ಎಂಬ ಕಪಿಲೇಂದ್ರನ ವಕ್ತವ್ಯದಲ್ಲಿ ಈ ಬಿರುಕು ಎದ್ದು ಕಾಣುತ್ತದೆ. ಅಲ್ಲಿಂದಾಚೆಗೆ ಅರಸನಿಗಾಗಿ ದೇವತೆ ಅಥವಾ ದೇವಾಲಯಕ್ಕಾಗಿ ಅರಸ ಮಾಡಿದ ನೆರವು ಯಾ ಸೇವೆಗಳ ಕಥನವನ್ನು ಕಾಣುತ್ತೇವೆಯೇ ಹೊರತು ದೇವಾಲಯ ರಾಜತ್ವದ ಅಭಿವ್ಯಕ್ತಿಯಾಗಿ ಉಳಿಯುವುದಿಲ್ಲ. ಇದು ಹದಿಮೂರು ಹಾಗೂ ಹದಿನೈದನೆಯ ಶತಮಾನಗಳ ನಡುವೆ ಅರ್ಚಕವರ್ಗವು ಪರ್ಯಾಯ ಶಕ್ತಿಕೇಂದ್ರವಾಗಿ ಬೆಳೆದು ದೇವಾಲಯಕ್ಕೆ ಪ್ರಭುತ್ವಾತೀತ ಸಾಂಸ್ಥಿಕತೆಯನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾದುದ್ದನ್ನು ಬಯಲುಪಡಿಸುತ್ತದೆ.

ಕಪಿಲೇಂದ್ರನು ತನ್ನ ಆರಂಭದ ಶಾಸನವೊಂದರಲ್ಲಿ ರಾಜ್ಯಕ್ಕೆ ಸಲ್ಲಬೇಕಾದ ಉಪ್ಪಿನ ಹಾಗೂ ಕವಡೆಯ ಮೇಲಿನ ತೆರಿಗೆಯನ್ನು ಮನ್ನಾ ಮಾಡಿದ್ದಾನೆ. ಈ ಆದೇಶವನ್ನು ಯಾವನೇ ಅರಸ ಲಂಘಿಸಿದರೆ ಅದು ಜಗನ್ನಾಥನಿಗೆ ದ್ರೋಹವೆಸಗಿದಂತೆ ಎಂದು ಈ ಶಾಸನದಲ್ಲಿ ಹೇಳಲಾಗಿದೆ. ಈ ಶಾಸನವನ್ನು ಪುರಿ ದೇವಾಲಯದ ಜಯವಿಜಯ ದ್ವಾರದಮೇಲೆ ಕೆತ್ತಿರುವುದು ಗಮನಾರ್ಹ.[33] ಈ ಶಾಸನದಲ್ಲಿಯೂ ಪ್ರಭುತ್ವ ಹಾಗೂ ದೇವಾಲಯಗಳ ನಿಕಟ ಸಂಬಂಧ ಮೂಡಿಬಂದಿದೆಯೇ ಹೊರತು ಹಿಂದಿನಂತೆ

ದೇವಾಲಯವು ಪ್ರಭುತ್ವದ ಅಭಿವ್ಯಕ್ತಿಯಾಗಿ ಉಳಿದಿಲ್ಲ. ಇಲ್ಲಿ ಅರಸ ಜಗನ್ನಾಥನಿಗೆ ದ್ರೋಹ ಎಸಗಬಲ್ಲವನಾಗಿದ್ದಾನೆ!

ದೇವಾಲಯದ ಆಚರಣೆಗಳಲ್ಲಿ ಕಪಿಲೇಂದ್ರನು ಯಾವುದೇ ಬದಲಾವಣೆಗಳನ್ನು ತಂದಂತೆ ತೋರುವುದಿಲ್ಲ. ಅಂಥ ಬದಲಾವಣೆಗಳು ನಡೆದದ್ದು ಅವನ ಬಳಿಕ ಪಟ್ಟವೇರಿದ ಪುರುಷೋತ್ತಮನ ಕಾಲದಲ್ಲಿ (ಆಳ್ವಿಕೆ 1467–1497). ಮಾದಳಾಪಾಂಜಿಯ ಪ್ರಕಾರ ಕಪಿಲೇಂದ್ರನಿಗೆ ಹದಿನೆಂಟು ಜನ ಮಕ್ಕಳಲ್ಲದೆ ಅನೈತಿಕ ಸಂಬಂಧವೊಂದರಲ್ಲಿ ಜನಿಸಿದ ಪುತ್ರನೊಬ್ಬನಿದ್ದ. ಈ ಅನೈತಿಕ ಸಂಬಂಧದ ಪುತ್ರನೇ ಪುರುಷೋತ್ತಮದೇವ. ಕಪಿಲೇಂದ್ರನ ಬಳಿಕ ಅವನ ಹಿರಿಯ ಮಗ ಹಮ್ವೀರ ಪಟ್ಟವೇರಬೇಕಿತ್ತಾದರೂ ಜಗನ್ನಾಥನ ಇಚ್ಛೆಯಂತೆ ರಾಜಕಿರೀಟ ಪುರುಷೋತ್ತಮನ ಪಾಲಾಯಿತು ಎಂದು ಇಲ್ಲಿ ಹೇಳಲಾಗಿದೆ.[34] ಇದರ ಸತ್ಯಾಸತ್ಯತೆ ಏನೇ ಇದ್ದರೂ ಪುರುಷೋತ್ತಮನ ಪಟ್ಟಾರೋಹಣ ಸಹಜವಾಗಿರದೆ ಗೊಂದಲದಿಂದ ಕೂಡಿತ್ತೆಂದು ಈ ಕಥೆ ಸೂಚಿಸುತ್ತದೆ. ತನ್ನ ಭುವನೇಶ್ವರೀ ಸ್ತೋತ್ರದಲ್ಲಿ ಪುರುಷೋತ್ತಮನು ಕಪಿಲೇಂದ್ರ ತೋರಿದ ಕೃಪಾಕಟಾಕ್ಷಕ್ಕೆ ಅವನಿಗೆ ಕೃತಜ್ಞತೆ ವ್ಯಕ್ತಪಡಿಸಿದ್ದಾನೆ.[35]

ತನ್ನ ಆಳ್ವಿಕೆಯ ಆರಂಭದಲ್ಲಿ ಪುರುಷೋತ್ತಮದೇವನು ದೇವಾಲಯಕ್ಕೆ, ಅರ್ಚಕವರ್ಗಕ್ಕೆ, ಹಾಗೂ ಸಾಮಂತಾದಿಗಳಿಗೆ ಅಪಾರ ಪ್ರಮಾಣದಲ್ಲಿ ದಾನದತ್ತಿಗಳನ್ನು ನೀಡಿದನು. ಅಲ್ಲಿಂದಾಚೆಗೆ ದೇವಾಲಯದ ಆಂತರಿಕ ವಿಚಾರಗಳಲ್ಲಿ ಅವನು ವ್ಯಾಪಕ ಹಸ್ತಕ್ಷೇಪ ನಡೆಸಿದ್ದಾಗಿ ಕಂಡುಬರುತ್ತದೆ. ಏರಿಬರುತ್ತಿದ್ದ ಅರ್ಚಕವರ್ಗದ ಪ್ರಭಾವವನ್ನು ಸದೆಬಡಿಯುವುದು ಇವನ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದ್ದಿರಬಹುದು. ಜಗನ್ನಾಥಾರಾಧನೆ ಹಾಗೂ ಪೂಜೆಯ ಹಲವು ಮೌಲಿಕ ಗ್ರಂಥಗಳು ಇವನ ಮತ್ತು ಇವನ ಬಳಿಕ ಪಟ್ಟವೇರಿದ ಪ್ರತಾಪರುದ್ರನ (ಆಳ್ವಿಕೆ 1497–1540) ಕಾಲದಲ್ಲಿ ರಚಿತವಾದವು. ಈ ಪೈಕಿ ಅತ್ಯಂತ ಹಳೆಯ ಕೃತಿ *ಗೋಪಾಲಾರ್ಚನ ವಿಧಿ*. ಇದನ್ನು ಪುರುಷೋತ್ತಮನೇ ರಚಿಸಿದ್ದೆಂದು ನಂಬಲಾಗಿದೆ. ಈ ಕಾಲದ ಕೃತಿಗಳಲ್ಲಿ ಪೂಜೆಯು "ಗೋಪೀಜನವಲ್ಲಭಾಯ ಸ್ವಾಹಾ" ಎಂಬ ದಶಾಕ್ಷರ ಮಂತ್ರ ಹಾಗೂ "ಕ್ಲೀಂ ಕೃಷ್ಣಾಯ ಗೋಪೀಜನವಲ್ಲಭಾಯ ಸ್ವಾಹಾ" ಎಂಬ ಅಷ್ಟಾದಶಾಕ್ಷರ ಮಂತ್ರವನ್ನು ಆಧರಿಸಿವೆ. *ಚಾಯನೀ ಚಕಡ* ಎಂಬ ಕೃತಿಯಲ್ಲಿ ಪುರುಷೋತ್ತಮನು ದಶಾಕ್ಷರ ಮಂತ್ರದಿಂದ ಜಗನ್ನಾಥನನ್ನು ಪೂಜಿಸುತ್ತಿದ್ದನೆಂದು ಹೇಳಲಾಗಿದೆ.[36] ನಿತ್ಯಪೂಜೆಯ ವಿಧಿವಿಧಾನಗಳನ್ನು ಹೊಸ ಕೃತಿಗಳ ನೆರವಿನೊಂದಿಗೆ ಪರಿಷ್ಕರಿಸುವ ಈ ಕ್ರಮದ ಮೂಲಕ ಪುರುಷೋತ್ತಮ ಮತ್ತು ಪ್ರತಾಪರುದ್ರರು ಆಚಾರಗಳ ವಿಷಯದಲ್ಲಿಯೂ ತೀರ್ಮಾನಗಳನ್ನು ಕೈಗೊಳ್ಳುವ ಅರ್ಚಕವರ್ಗದ ಸ್ವಾತಂತ್ರ್ಯಕ್ಕೆ ತಡೆಯೊಡ್ಡಿ ದೇವಾಲಯದ ಮೇಲಿನ ಅಧಿಕಾರವನ್ನು ಸುಭದ್ರಗೊಳಿಸಿದರು.

ಪುರುಷೋತ್ತಮನು ಹುಟ್ಟುಹಾಕಿದ ಪ್ರಮುಖ ಆಚರಣೆಗಳಲ್ಲಿ ಒಂದು ಛೇರಾಪಹಾರ. ಇದರ ಹಿಂದೆಯೂ ಅರ್ಚಕವರ್ಗವನ್ನು ಬಿಗಿಹಿಡಿತದಲ್ಲಿಡುವ ಉದ್ದೇಶವೇ ಇದ್ದಂತೆ ತೋರುತ್ತದೆ. ಇಂದಿಗೂ ನಡೆಯುತ್ತ ಬಂದಿರುವ ಈ ಆಚರಣೆ ರಥಯಾತ್ರೆಗೆ ಸಂಬಂಧಿಸಿದ್ದು. ರಥಯಾತ್ರೆಯಲ್ಲಿ ಜಗನ್ನಾಥ–ಸುಭದ್ರಾ–ಬಲಭದ್ರ–ಸುದರ್ಶನರನ್ನು ತೇರುಗಳ ಮೇಲೆ

ಕುಳ್ಳಿರಿಸಿದ ಬಳಿಕ ತೇರುಗಳನ್ನು ಎಳೆಯಲು ಪ್ರಾರಂಭಿಸುವ ಮುನ್ನ ಗಜಪತಿ ಮಹಾರಾಜನು ಖುದ್ದಾಗಿ ಬಂದು ರಥಗಳ ಪ್ರಾಂಗಣವನ್ನು ಪೊರಕೆ ಹಿಡಿದು ಗುಡಿಸಬೇಕು. ಇದೇ ವಿಧಿವತ್ತಾಗಿ ನಡೆಯುವ ಛೇರಾ (ಒರೆಸುವ) ಪಹಾರ (ಗುಡಿಸುವ) ಆಚರಣೆ. ಸೂರ್ಯವಂಶಿಗಳ ಪರಿಕಲ್ಪನೆಯಲ್ಲಿ ಅರಸ ಭಗವಂತನ ಸೇವಕ. ಛೇರಾಪಹಾರ ಭಗವಂತನ ಪ್ರತಿ ಅವನಿಗಿರುವ ವಿನಯ, ವಿನಮ್ರತೆಗಳನ್ನು ಸೂಚಿಸುತ್ತದೆ. ಲಕ್ಷಾಂತರ ಜನರು ಸೇರಿರುವಲ್ಲಿ ಅವರ ಸಮ್ಮುಖ ಈ ವಿನಯವನ್ನು ಪ್ರದರ್ಶಿಸುವುದು ಗಜಪತಿಗಳ ಅಧಿಕಾರದ ಪ್ರಮುಖ ಕೊಂಡಿಗಳಲ್ಲಿ ಒಂದಾಗಿತ್ತು. ಛೇರಾಪಹಾರವನ್ನು ಅನಿವಾರ್ಯಗೊಳಿಸುವ ಮೂಲಕ ಪುರುಷೋತ್ತಮನೇ ಮೊದಲುಗೊಂಡ ಗಜಪತಿಗಳು ದೇವಾಲಯದ ಮೇಲಿನ ತಮ್ಮ ಹಿಡಿತವನ್ನು ಬಿಗಿಪಡಿಸಿಕೊಂಡು ಅರ್ಚಕವರ್ಗಕ್ಕೆ ಸವಾಲೆಸಗಿ ಅವರ ಪ್ರಭಾವವನ್ನು ನಿಯಂತ್ರಿಸಲು ಮುಂದಾದರು.

ಛೇರಾಪಹಾರ ಆಚರಣೆಗೆ ಸಂಬಂಧಿಸಿದ ಮೋಹಕವಾದ ಕಥೆಯೊಂದಿದೆ. ಕಾಂಚಿಕಾವೇರಿ ವೃತ್ತಾಂತವೆಂದೇ ಖ್ಯಾತವಾಗಿರುವ ಈ ಕಥೆಯ ಪ್ರಕಾರ ಪುರುಷೋತ್ತಮನಿಗೆ ಕಾಂಚಿಯ ರಾಜನ ಮಗಳು ಪದ್ಮಾವತಿಯಲ್ಲಿ ಅನುರಾಗ ಹುಟ್ಟಿ ಅವಳನ್ನು ವರಿಸಿಕೊಳ್ಳುವ ಮನಸ್ಸಾಯ್ತು. ಗಜಪತಿಗೆ ಮಗಳನ್ನು ನೀಡಲು ಒಪ್ಪಿದ ಕಾಂಚಿಯ ಅರಸನು ಮಗಳೊಂದಿಗೆ ಪುರಿಗೆ ಆಗಮಿಸಿದ. ಅದು ರಥಯಾತ್ರೆಯ ಸಮಯವಾಗಿತ್ತು. ಪುರಿಗೆ ಬಂದ ಕಾಂಚಿರಾಜನ ಕಣ್ಣಿಗೆ ಬಿದ್ದುದ್ದೇನು? ತನ್ನ ಮಗಳಿಗೆ ವರನಾಗಬೇಕಾದ ಗಂಡು ಪೊರಕೆ ಹಿಡಿದು ಕಸಗುಡಿಸುತ್ತಿರುವ ದೃಶ್ಯ. ವಿವಾಹವನ್ನು ಕೂಡಲೆ ರದ್ದುಗೊಳಿಸಿ ಮಗಳೊಂದಿಗೆ ಅವನು ಕಾಂಚಿಗೆ ಮರಳಿಹೋದ. ಕುಪಿತನಾದ ಪುರುಷೋತ್ತಮನು ಇದು ತನಗಷ್ಟೇ ಆದ ಅಪಮಾನವಲ್ಲ, ಜಗನ್ನಾಥನಿಗೂ ಆದ ಅಪಮಾನ ಎಂದು ಕಾಂಚಿಯನ್ನು ಆಕ್ರಮಿಸಿದ. ಆದರೆ ಯುದ್ಧದಲ್ಲಿ ಸೋತುಹೋದ. ಪುರಿಗೆ ಮರಳಿದ ಪುರುಷೋತ್ತಮನು ಜಗನ್ನಾಥನನ್ನು ಪ್ರಾರ್ಥಿಸಲು, ಜಗನ್ನಾಥ ಅವನಿಗ ಪರಿಹಾರ ಹೇಳಿದ, ಪ್ರತ್ಯಕ್ಷವಾಗಿ ಅಲ್ಲ, ಯಾವಾಗಲೂ ಮಾಡುವಂತೆ ಕನಸಿನಲ್ಲಿ ಬಂದು. ಪುರುಷೋತ್ತಮನಿಗೆ ಕಾಂಚಿಯನ್ನು ಮತ್ತೊಮ್ಮೆ ಆಕ್ರಮಿಸು, ಈ ಸಲ ನಾನೂ ಅಣ್ಣ ಬಲಭದ್ರರೂ ಖುದ್ದಾಗಿ ನಿನ್ನೊಡನೆ ಬಂದು ಯುದ್ಧದಲ್ಲಿ ನೆರವಾಗುತ್ತೇವೆ ಎಂದು ಆದೇಶವಿತ್ತ. ಅದರಂತೆ ಪುರುಷೋತ್ತಮ ಪುನಃ ಯುದ್ಧಸಾರಿದ. ಈ ಸಲ ದಕ್ಷಿಣದಿಕ್ಕಿಗೆ ಹೊರಟಿದ್ದ ಸೈನ್ಯವು ಚಿಲಿಕಾ ಸರೋವರ ತಲುಪಿದಾಗ ಅಲ್ಲಿ ಮಾಣಿಕೀ ಎಂಬ ಹಾಲುಮಾರುವ ಹೆಣ್ಣೊಬ್ಬಳು ಪುರುಷೋತ್ತಮನನ್ನು ತಡೆದುನಿಲ್ಲಿಸಿ ಅಶ್ವಾರೂಢರಾದ ಇಬ್ಬರು ಸೈನಿಕರು ನನ್ನ ಬಳಿ ಬಂದರು. ಒಬ್ಬ ಕಪ್ಪು ಬಣ್ಣದವ, ಇನ್ನೊಬ್ಬ ಬಿಳಿ ಬಣ್ಣದವ. ಇಬ್ಬರೂ ನನ್ನ ಕೈಯಿಂದ ಮೊಸರು ಪಡೆದು ಸೇವಿಸಿದರು, ಆದರೆ ಹಣ ನೀಡಲಿಲ್ಲ, ಕೇಳಿದಾಗ ನಾವು ಅರಸನ ಸೈನ್ಯದಲ್ಲಿ ಸೈನಿಕರು, ನಮ್ಮ ಬಳಿ ಹಣವಿಲ್ಲ. ಈ ಉಂಗುರವನ್ನು ತೆಗೆದುಕೋ, ಅರಸ ಇತ್ತಲಾಗಿ ಹೊರಟಾಗ ಅವನಿಗೆ ಇದನ್ನು ನೀಡು, ಮೊಸರಿನ ಹಣವನ್ನು ಅರಸ ನಿನಗೆ ಕೊಡುತ್ತಾನೆ ಎಂದರು ಎನ್ನುತ್ತಾ ಉಂಗುರವನ್ನು ನೀಡಿದಳು. ಉಂಗುರವನ್ನು ಕಂಡೊಡನೆಯೇ ಅದು ಜಗನ್ನಾಥನದೆಂದು ಗುರುತಿಸಿದ ಪುರುಷೋತ್ತಮನಿಗೆ ಭಗವಂತ ತನ್ನೊಂದಿಗಿದ್ದಾನೆ ಎಂಬುದು ಖಾತ್ರಿಯಾಯ್ತು. ಮಾಣಿಕೀಯನ್ನು ಆದರಿಸಿ ಅವಳ ಹೆಸರಲ್ಲಿ ಅಲ್ಲಿ ಊರೊಂದನ್ನು ಸ್ಥಾಪಿಸಿದ. ಅದುವೇ



ಜಗನ್ನಾಥದಾಸ
(ಆಧುನಿಕ ಚಿತ್ರಕಾರರ ಕಲ್ಪನೆಯಲ್ಲಿ)



ಕೋಣಾರ್ಕ ದೇವಾಲಯದಲ್ಲಿ ಜಗನ್ನಾಥ, ಶಿವಲಿಂಗ ಹಾಗೂ
ದುರ್ಗೆಯರನ್ನು ಪೂಜಿಸುತ್ತಿರುವ ನರಸಿಂಹನ ಶಿಲ್ಪ



ಚೈತನ್ಯ (ಆಧುನಿಕ ಚಿತ್ರಕಾರನ ಕಲ್ಪನೆಯಲ್ಲಿ)



ಶಂಕರಾಚಾರ್ಯ (ಆಧುನಿಕ ಚಿತ್ರಕಾರನ ಕಲ್ಪನೆಯಲ್ಲಿ)

ಪ್ರಸಿದ್ಧ ಬಂದರುನಗರವಾದ ಮಾಣಿಕೀಪಟ್ಟ. ಅಲ್ಲಿಂದ ಮುಂದೆ ಸಾಗಿ ಕಾಂಚಿಯನ್ನು ಆಕ್ರಮಿಸಿ ಜಗನ್ನಾಥ, ಬಲಭದ್ರರ ನೆರವಿನೊಂದಿಗೆ ಯುದ್ಧದಲ್ಲಿ ಗೆದ್ದ ಪುರುಷೋತ್ತಮನು ಕಾಂಚಿರಾಜನ ಮಗಳು ಪದ್ಮಾವತಿಯನ್ನು ಓಡಿಶ್ಶಾಗೆ ಕರೆತಂದ. ಆದರೆ ಅವಳನ್ನು ಮದುವೆಯಾಗಲು ಒಪ್ಪಿಕೊಳ್ಳಲಿಲ್ಲ. ಅವಳ ತಂದೆಗೆ ಪಾಠ ಕಲಿಸಬೇಕು ಎಂಬ ಉದ್ದೇಶದಿಂದ ಅವಳನ್ನು ತನ್ನ ಮಂತ್ರಿಯ ಕೈಗೆ ಒಪ್ಪಿಸಿ ಯೋಗ್ಯನಾದ ಕಸಗುಡಿಸುವವನೊಬ್ಬನಿಗೆ ಕೊಟ್ಟು ಇವಳ ಮದುವೆ ಮಾಡಿಸು ಎಂದು ಆದೇಶ ನೀಡಿದ. ಮಂತ್ರಿ ಬಲು ಚಾಣಾಕ್ಷ. ಆಗಲಿ ಎಂದು ಒಪ್ಪಿಕೊಂಡವನು ಮುಂದಿನ ರಥಯಾತ್ರೆಯ ವರೆಗೆ ಕಾದು ಪುರುಷೋತ್ತಮನು ಛೇರಾಪಹಾರಕ್ಕೆಂದು ಪೊರಕೆ ಹಿಡಿದು ಬಂದಾಗ ಪದ್ಮಾವತಿಯ ಕೈಗೆ ಹೂವಿನ ಹಾರ ನೀಡಿ ಅದನ್ನು ಅರಸನ ಕೊರಳಿಗೆ ಹಾಕೆಂದು ಹೇಳಿದ. ಹೀಗೆ ಯೋಗ್ಯವಾದ ಕಸಗುಡಿಸುವವನೊಂದಿಗೆ ಆಕೆಯ ವಿವಾಹವಾಯಿತು.[37]

ಅರ್ಚಕವರ್ಗದ ಪ್ರಭಾವವನ್ನು ನಿಯಂತ್ರಿಸಲು ಸೂರ್ಯವಂಶಿ ಗಜಪತಿಗಳಿಗೆ ಪರ್ಯಾಯ ಶಕ್ತಿಕೇಂದ್ರವೊಂದರ ಅಗತ್ಯವಿತ್ತು. ಭಕ್ತಾದಿಗಳಾದ ಸಾಮಾನ್ಯ ಜನರೊಂದಿಗೆ ಸಂವಾದಿಸುವ ಮತ್ತು ಅವರ ಆಧ್ಯಾತ್ಮಿಕ ಅಗತ್ಯಗಳಿಗೆ ಸ್ಪಂದಿಸಬಲ್ಲ ಶಕ್ತಿಕೇಂದ್ರವು ಇದಾಗಿರಬೇಕಿತ್ತು. ಅದರಮೂಲಕ ಮಾತ್ರ ಅರ್ಚಕರ ಹಮ್ಮು, ದುರಾಡಳಿತಗಳನ್ನು ಹತೋಟಿಯಲ್ಲಿಡುವುದು ಸಾಧ್ಯವಿತ್ತು. ಭಾರತದ ವಿವಿಧ ಪ್ರದೇಶಗಳಲ್ಲಿ ಆಗ ವೈಷ್ಣವಭಕ್ತಿಯ ಅಲೆ ಪ್ರಾರಂಭಗೊಂಡಿತ್ತು. ಕರ್ನಾಟಕದಲ್ಲಿ ಕನಕ, ಪುರಂದರಾದಿ ಹರಿದಾಸರು, ಆಂಧ್ರದಲ್ಲಿ ಅಣ್ಣಮಯ್ಯನಂತ ಸಂತರು, ಕೇರಳದಲ್ಲಿ ಎಲುತ್ತಚ್ಚನ್, ಪೂಂದಾನಂ ಇತ್ಯಾದಿಗಳು, ಮಹಾರಾಷ್ಟ್ರದಲ್ಲಿ ತುಕಾರಾಂ, ಗುಜರಾತಿನಲ್ಲಿ "ವೈಷ್ಣವ ಜನತೋ ತೇಹೇ ಕಹಿಯೇ" ಎಂಬ ಮಹಾತ್ಮಾ ಗಾಂಧಿಗೆ ಪ್ರಿಯವಾಗಿದ್ದ ಹಾಡನ್ನು ರಚಿಸಿದ ನರಸಿಂಹ ಮೆಹತಾ, ರಾಜಸ್ಥಾನದಲ್ಲಿ ಮೀರಾ, ಉತ್ತರಭಾರತದಲ್ಲಿ ವಲ್ಲಭ, ರಾಮಾನಂದ, ಕಬೀರ್, ತುಲ್ಸೀದಾಸ್, ಸೂರ್ ದಾಸ್, ಕೇಶವ್ ದಾಸ್, ಹೀಗೆ ವೈಷ್ಣವ ಸಂತರು ದೇಶದ ಅನೇಕ ಭಾಗಗಳಲ್ಲಿ ಕ್ರಿಯಾಶೀಲರಾಗಿದ್ದ ಯುಗ ಇದಾಗಿತ್ತು.

ಒಡಿಶ್ಶಾದಲ್ಲಿಯೂ ಸ್ಥಿತಿ ಭಿನ್ನವಾಗಿರಲಿಲ್ಲ. ಪುರುಷೋತ್ತಮ, ಪ್ರತಾಪರುದ್ರರ ಕಾಲದಲ್ಲಿ ಒಡಿಶ್ಶಾದಲ್ಲಿ ಅನೇಕ ಜನ ವೈಷ್ಣವಸಂತರ ಜನನವಾಯಿತು. ಇವರಲ್ಲಿ ಐವರು ತಮ್ಮ ಜೀವಿತದ ಬಹುಪಾಲನ್ನು ಪುರಿಯಲ್ಲೇ ಕಳೆದರು. ಪ್ರಾಣಸ್ನೇಹಿತರಾಗಿದ್ದ ಈ ಐವರು ಸಂತರನ್ನು ಒಡಯಾ ಪರಂಪರೆ ಪಂಚಸಖಾ ಎಂದು ಕರೆಯುತ್ತದೆ. ಈ ಸಂತರೇ ಬಳರಾಮದಾಸ, ಜಗನ್ನಾಥದಾಸ, ಅಚ್ಯುತಾನಂದದಾಸ, ಜಶವಂತದಾಸ ಮತ್ತು ಶಿಶು ಅನಂತದಾಸ. ಈ ಐದು ಮಂದಿ ಸಖರು ಒಡಿಯಾದಲ್ಲಿ ಬೃಹತ್ ಪ್ರಮಾಣದಲ್ಲಿ ಕಾವ್ಯ ಹಾಗೂ ದರ್ಶನಗ್ರಂಥಗಳನ್ನು ರಚಿಸಿದ್ದಾರೆ. ಇವರಲ್ಲಿ ಜಗನ್ನಾಥದಾಸ ಬ್ರಾಹ್ಮಣ, ಉಳಿದ ನಾಲ್ವರು ಕೆಳಜಾತಿಗೆ ಸೇರಿದವರು. ಅಂದಿನ ಮನೋಧರ್ಮ ಹಾಗೂ ದ್ವಂದ್ವಗಳಿಗೆ ಅನುಗುಣವಾಗಿ ಇವರು ಗಂಡಾಳ್ವಿಕೆ, ಬ್ರಾಹ್ಮಣಧರ್ಮಗಳ ಬಗ್ಗೆ ಅಪಾರ ಗೌರವವಿಶ್ವಾಸಗಳನ್ನು ತೋರುತ್ತಲೇ ಅಗತ್ಯ ಬಂದಾಗ ಈ ವ್ಯವಸ್ಥೆಯ ವಿರುದ್ಧ ಬಂಡೆದ್ದು ನಿಲ್ಲಲು ಮುಂದಾದದ್ದು ಅಂದಿನ ಜನಜೀವನದ ಮೇಲೆ ಅಪಾರ ಪ್ರಭಾವ ಬೀರಿದ್ದಾಗಿ ಕಾಣುತ್ತೇವೆ.[38]

ಐವರಲ್ಲಿ ಹಿರಿಯನು ಬಳರಾಮದಾಸ. ಇವನ ಜನನವು 1470–80ಗಳ ನಡುವೆ ನಡೆಯಿತು. ವಿಷ್ಣುಸ್ವಾಮಿ ಸಂಪ್ರದಾಯದೊಂದಿಗೆ ಗುರುತಿಸಿಕೊಂಡ ಇವನು ರಾಮಾಯಣವನ್ನು ಜಗಮೋಹನ ರಾಮಾಯಣ ಎಂಬ ಹೆಸರಲ್ಲಿ ಒಡಿಯಾ ಭಾಷೆಗೆ ಅನುವಾದಿಸಿದ್ದಾನೆ. *ಪ್ರಣವಗೀತ, ವಿರಾಟಗೀತ, ಅಮರಕೋಶಗೀತ, ಬ್ರಹ್ಮಾಂಡಭೂಗೋಳ, ಗರುಡಗೀತ, ವೇದಾಂತಸಾರ ಗುಪ್ತಗೀತ, ನಾಮಮಾಹಾತ್ಮ್ಯ, ಕಮಳಲೋಚನ ಚೌತೀಶ, ಭಾವಸಮುದ್ರ, ಗುಪ್ತಸಾರ* ಇವನ ಇತರ ಕೃತಿಗಳು. *ಲಕ್ಷ್ಮೀಪುರಾಣ* ಎಂಬ ವಿಶಿಷ್ಟ ಕೃತಿಯ ಮೇಲೆ ಇವನ ಖ್ಯಾತಿ ನಿಂತಿದೆ. ಮಾರ್ಗಶಿರ ಮಾಸದ ಪ್ರತಿ ಗುರುವಾರದಂದು ಮಹಿಳೆಯರು ಲಕ್ಷ್ಮೀಪೂಜೆ ಮಾಡಿ ಈ ಪುರಾಣವನ್ನು ಓದುವ ಯಾ ಕೇಳುವ ವಾಡಿಕೆ ಇಂದಿಗೂ ಒಡಿಶ್ಶಾದಲ್ಲಿ ಪ್ರಚಾರದಲ್ಲಿದೆ.

1480–90ರ ನಡುವಲ್ಲಿ ಜನಿಸಿದ ಜಗನ್ನಾಥದಾಸನು ಭಾಗವತಪುರಾಣವನ್ನು ಒಡಿಯಾಗೆ ತಂದವನು. ಇದೇ ಅವನ ಬಹುದೊಡ್ಡ ಸಾಧನೆಯಾಗಿದೆ. ಇತ್ತೀಚಿನ ವರೆಗೆ ಕರಾವಳಿ ಒಡಿಶ್ಶಾದ ಬಹುತೇಕ ಗ್ರಾಮಗಳಲ್ಲಿ ಭಾಗವತಟುಂಗಿ ಎಂಬ ಸ್ಥಳವೊಂದಿರುತ್ತಿತ್ತು. ಅಲ್ಲಿ ನಿರಂತರ ಭಾಗವತ ಪಾರಾಯಣ ನಡೆಯುತ್ತಿದ್ದು ಅದನ್ನು ಶ್ರವಿಸುತ್ತಿದ್ದ ನಿರಕ್ಷರರಿಗೂ ಭಾಗವತದ ಹಲವು ಭಾಗಗಳು ಗಾದೆಮಾತಿನಂತೆ ಬಾಯಿಪಾಠವಾಗಿತ್ತು. ಜಗನ್ನಾಥದಾಸ ಬಹುದೊಡ್ಡ ಪಂಡಿತ. ಅವನ ಭಕ್ತಿ, ಪಾಂಡಿತ್ಯಗಳಿಗೆ ಮೆಚ್ಚಿ ಚೈತನ್ಯನು ಅವನನ್ನು ಅತಿಬಡಿ (ಅತಿದೊಡ್ಡ) ಎಂಬ ಹೆಸರಿಂದ ಸಂಬೋಧಿಸಿದನೆಂದು ನಂಬಲಾಗಿದೆ. ಚೈತನ್ಯನೊಂದಿಗೆ ಇವನಿಗೆ ಅತಿನಿಕಟ ಸಂಬಂಧವಿತ್ತು. ನಿಕಟವೆಂದರೆ, ಪಿಸುಮಾತು, ವದಂತಿಗಳನ್ನು ಹುಟ್ಟುಹಾಕುವಷ್ಟು ನಿಕಟವೆಂದು ತಿಳಿದುಬರುತ್ತದೆ.[39]

ಐವರಲ್ಲಿ ಅತ್ಯಂತ ಕಿರಿಯವ ಅಚ್ಯುತಾನಂದದಾಸ. ನಿಂಬಾರ್ಕ ಸಂಪ್ರದಾಯದೊಂದಿಗೆ ಇವನಿಗೆ ಸಂಬಂಧವಿತ್ತು. 1495–1505ರ ನಡುವಲ್ಲಿ ಜನಿಸಿದ ಇವನು ನೂರಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾನೆ. ಇವನ ಮಹತ್ವಾಕಾಂಕ್ಷೆಯ ಕೃತಿ *ಶೂನ್ಯಸಂಹಿತ*. ಈ ಕೃತಿಯಲ್ಲಿ ಜಗನ್ನಾಥಧರ್ಮದ ಸಂದರ್ಭದಲ್ಲಿ ಶೂನ್ಯವಾದದ ತತ್ವವನ್ನು ವಿವರಿಸಿದ್ದಾನೆ ಅಚ್ಯುತಾನಂದ. ಇವನ ಮುಖ್ಯ ಕೃತಿಗಳಲ್ಲಿ ಕೆಲವೆಂದರೆ *ಜ್ಞಾನಭಕ್ತಿಗೀತ, ಬ್ರಹ್ಮಶಾಂಕುಳಿ, ಅನಾಕಾರಸಂಹಿತ, ಶೂನ್ಯಸಂಹಿತಾ ಚೌಷಠೀ ಟೀಕಾ, ಚಯಾಳಿಶಾ ಪಟಳ, ಶಬ್ದಬ್ರಹ್ಮಸಂಹಿತ, ತತ್ವಬೋಧಿನಿ, ಗುರುಭಕ್ತಿಗೀತ, ಹರಿವಂಶ, ಸಾರಸ್ವತಮಾಲಿಕ, ಮಣಿಬಂಧಗೀತ, ಕೈವರ್ತಗೀತ, ಗೋಪಾಲಂಕ ಓಗಳ, ಶೂನ್ಯಗೀತ, ದಾಸಪಟಳ, ನಿತ್ಯರಹಸ್ಯ, ಅಷ್ಟಗುಜ್ಜರಿ, ಅಮರಜಮರಸಂಹಿತ, ಜ್ಞಾನಬಂಧಗೀತ* ಇತ್ಯಾದಿ.

ಜಗನ್ನಾಥದಾಸ ಜನಿಸಿದ ಅದೇ ಸರಿಸುಮಾರಿಗೆ ಹುಟ್ಟಿದವರು ಜಶವಂತದಾಸ ಹಾಗೂ ಶಿಶು ಅನಂತದಾಸರು. ಜಶವಂತನು ಮಾಧ್ವಮತದ ಅನುಯಾಯಿಯಾಗಿದ್ದ. *ಪ್ರೇಮಭಕ್ತಿ ಬ್ರಹ್ಮಗೀತ* ಇವನ ಪ್ರಮುಖ ಕೃತಿಯಾಗಿದೆ. ಇವನ ಇತರ ರಚನೆಗಳಲ್ಲಿ *ಆತ್ಮಪರಚೇಗೀತ, ಗೋಬಿಂದಚಂದ್ರ, ಶಿಬಶಿರೋದಯ* ಹಾಗೂ *ಚೌರಾಶೀ ಆಜ್ಞಾ* ಸೇರಿವೆ. ಶಿಶು ಅನಂತ ರಾಮಾನಂದನ ಪಂಥಕ್ಕೆ ಸೇರಿದವನಾಗಿದ್ದ. *ಹೇತು ಉದಯ ಭಾಗಬತ* ಇವನ ಪ್ರಮುಖ ಗ್ರಂಥ. *ಗುಪ್ತಟೀಕಾ, ಚುಂಬಕ ಮಾಳಿಕಾ, ನೀಳಗಿರಿಚರಿತ, ಶಿಬದೇಬಗೀತ,*

ಭಕ್ತಿಮುಕ್ತಿ ಪ್ರದಾಯಕಗೀತಾ, ಉದೇಭಕರ, ಅರ್ಥತಾರಣಿ ಇವನ ಇತರ ಕೃತಿಗಳು. ಭುಬನೇಶ್ವರದ ಖಂಡಗಿರಿಯಲ್ಲಿ ಬಹುಕಾಲ ತಪಸ್ಸು ಕುಳಿತಿದ್ದ ಇವನು ತನ್ನ ರೂಪವನ್ನು ಇಚ್ಛೆಗೆ ತಕ್ಕಂತೆ ಬದಲಿಸುವ ಶಕ್ತಿಯನ್ನು ಪಡೆದಿದ್ದನೆಂದೂ ಅಂತೆಯೇ ತನಗೆ ಇಷ್ಟವಾದ ಶಿಶು ರೂಪದಲ್ಲಿ ಸದಾ ಇರುತ್ತಿದ್ದನೆಂದೂ ಶಿಶು ಅನಂತದಾಸ ಎಂಬ ಹೆಸರಿಗೆ ಇದೇ ಕಾರಣವೆಂದೂ ಜನಜನಿತ ನಂಬಿಕೆಯೊಂದಿದೆ. ಬಹುಶಃ ಇವನದು ಗಿಡ್ಡರೂಪವಾಗಿದ್ದು ಅದೇ ಈ ನಂಬಿಕೆಗೆ ಕಾರಣವಾಗಿರಬಹುದು.

ಶಾರಳನಿಂದ ಪ್ರಾರಂಭಗೊಂಡ ಜಗನ್ನಾಥನನ್ನು ಬುದ್ಧನೊಂದಿಗೆ ಸಮೀಕರಿಸುವ ಮನೋಧರ್ಮ ಪಂಚಸಖಾರಲ್ಲಿ ಪೂರ್ಣ ವಿಕಾಸ ಪಡೆದುಕೊಂಡಿತು. ಶೂನ್ಯಸಂಹಿತದಲ್ಲಿ ಅಚ್ಯುತಾನಂದದಾಸನು ಭಗವಂತನ ಬಾಯಲ್ಲಿ "ಅಚ್ಯುತ, ಕೇಳು ನೀನು ನಮ್ಮ ವಾಣಿ, ಕಲಿಯುಗದಲ್ಲಿ ಮತ್ತೆ ಬೌದ್ಧರೂಪದಲ್ಲಿ ಪ್ರಕಾಶಿಸುವೆವು, ಕಲಿಯುಗದಲ್ಲಿ ಬುದ್ಧರೂಪ, ನಿಜರೂಪ ಗೋಪ್ಯ" ಎಂದು ಹೇಳಿಸಿದ್ದಾನೆ.[40] ಪಂಚಸಖಾಗಳು ಮಾತ್ರವಲ್ಲ, ಅವರ ಸಮಕಾಲೀನರಾಗಿದ್ದ ಸಂತರೂ ಈ ವಿಚಾರವನ್ನು ಒಪ್ಪಿಕೊಂಡವರಾಗಿದ್ದರು. ಅಂದಿನ ಮತ್ತೊಬ್ಬ ಒಡಿಯಾ ಸಂತ ಚೈತನ್ಯದಾಸ (ಈತ ಹಾಗೂ ಚೈತನ್ಯ ಮಹಾಪ್ರಭು ಭಿನ್ನ ವ್ಯಕ್ತಿಗಳು) ತನ್ನ ನಿರ್ಗುಣಮಾಹಾತ್ಮ್ಯದಲ್ಲಿ ತನ್ನ ಇಷ್ಟದೇವತೆಯನ್ನು ಬುದ್ಧನಾರಾಯಣ ಎಂದು ಕರೆದಿರುವುದಲ್ಲದೆ[41] ಹರಿಯು ಸಂಸಾರದಲ್ಲಿ ಪ್ರಬುದ್ಧಬುದ್ಧ ಅವತಾರದಲ್ಲಿ ಜನಿಸಿದ್ದಾರೆ ಎಂದಿದ್ದಾನೆ.[42] ಪಂಚಸಖಾರ ಕಾಲದ ಬಳಿಕ ಬಂದ ಸಂತರಲ್ಲಿಯೂ ಈ ಸಮೀಕರಣೆಯನ್ನು ಕಾಣಬಹುದು. ದಿನಕೃಷ್ಣದಾಸನ ಬೌದ್ಧಬ್ರಹ್ಮಲಿಖನ ಎಂಬ ಕೃತಿ ಅದಕ್ಕೆ ಉತ್ತಮ ಉದಾಹರಣೆ. ಇಲ್ಲಿ ದಿನಕೃಷ್ಣನು ನೀಲಗಿರಿಯಲ್ಲಿ ಜಗನ್ನಾಥನು ಬುದ್ಧರೂಪದಲ್ಲಿ ವಿಹರಿಸುತ್ತಾನೆ, ನೀಲಾದ್ರಿಗೋಸಾಯಿಯಾದ ಆ ಬುದ್ಧನು ಯೋಗಾರೂಢನಾಗಿ ಕೂತು ಕಡುಪಾಷಾಣ ರೂಪ ಧರಿಸಿ ದಾರುಬ್ರಹ್ಮದಲ್ಲಿ ವಿಹರಿಸುತ್ತಾನೆ, ಎಷ್ಟೋ ಯುಗಗಳಿಂದ ಇದೇ ಬುದ್ಧ ಅವತಾರ, ಬೌದ್ಧಪ್ರಭು ನಿರಾಕಾರ, ಹತ್ತು ಅವತಾರ, ಇಷ್ಟಾದರೂ ಇವನಲ್ಲಿಯೇ ಬಂದು ಹೋಗುವುದು ನಿರಂತರ ಎಂದಿದ್ದಾನೆ.[43] ಹದಿನೆಂಟನೆಯ ಶತಮಾನದಲ್ಲಿ ರಚಿತವಾದ ನೀಲಾದ್ರಿ ಮಹೋದಯ ಎಂಬ ಸಂಸ್ಕೃತ ಕೃತಿಯಲ್ಲಿಯೂ ಇದೇ ಸಮೀಕರಣೆ ಇದೆ. ಅಲ್ಲಿ "ದಾರುಬ್ರಹ್ಮ ಸ್ವರೂಪಾಯ ತಸ್ಮೈ ಬುದ್ಧಾತ್ಮನೇ ನಮಃ" ಎಂದು ಜಗನ್ನಾಥನನ್ನು ಸ್ತುತಿಸಲಾಗಿದೆ.[44]

ಬುದ್ಧನೊಂದಿಗೆ ಜಗನ್ನಾಥನನ್ನು ಸಮೀಕರಿಸುವ ಈ ಮನೋಧರ್ಮದ ಹಿಂದಿನ ಕಾರಣ ಯಾ ಪ್ರೇರಣೆ ಏನು? ಇದಕ್ಕೆ ನಮ್ಮಲ್ಲಿ ಸ್ಪಷ್ಟವಾದ ಉತ್ತರವಿಲ್ಲ. ತಂದ್ರಾ ಪಟ್ನಾಯಕ್ ಅವರ ಪ್ರಕಾರ ಒಡಿಯಾ ಸಂತರು ಬೌದ್ಧಧರ್ಮದ ಕರುಣ ಹಾಗೂ ಶೂನ್ಯ ತತ್ವಗಳನ್ನು ತಮ್ಮ ಚಿಂತನೆಯಲ್ಲಿ ಅಳವಡಿಸಿಕೊಂಡು ವೈಷ್ಣವಧರ್ಮದ ಸಂಜ್ಞೆ, ಸ್ವರೂಪ, ಸೂಚಕಗಳನ್ನು ಬಳಸುತ್ತಲೇ ಆ ಧರ್ಮದಿಂದ ದೂರ ಸಾಗಿ ಸಮಾನತೆಯ ತತ್ವವನ್ನು ಪ್ರತಿಪಾದಿಸಿದರು.[45] ಅವರ ವಿಶ್ಲೇಷಣೆಯಲ್ಲಿ ಈ ಸಂತರ ಚಿಂತನೆಯಲ್ಲಿ ವೈಷ್ಣವ ಎನ್ನಬಹುದಾದ ಯಾವುದೇ ಅಂಶವಿಲ್ಲ, ಎಲ್ಲವನ್ನೂ ಸಂತರು ಬೌದ್ಧಧರ್ಮದ ಒಡಲಾಳದಲ್ಲಿ ಮುಳುಗಿಸಿದ್ದಾರೆ. ವಜ್ರಯಾನದಂತ ತಾಂತ್ರಿಕಬೌದ್ಧ ಪರಂಪರೆಯ ಪ್ರಭಾವವನ್ನು ಒಡಿಯಾ ಸಂತರ ಕೃತಿಗಳಲ್ಲಿ ಗುರುತಿಸುವ ಶ್ರಮ ಇವರದಾಗಿದೆ.[46]

ಮನೋರಮಾ ತ್ರಿಪಾಠಿಯವರು ಮತ್ತೊಂದು ವಾದವನ್ನು ಮಂಡಿಸುತ್ತಾರೆ. ಅವರ ಪ್ರಕಾರ ಶೂನ್ಯ ಎಂದರೆ ಏನೂ ಇರದ ಬರಿದಾದ ಅವಸ್ಥೆಯಲ್ಲ. ಅದು ನಿರ್ದಿಷ್ಟತೆ ಅಥವಾ ಸ್ವಭಾವದ ಅಭಾವವನ್ನು ಸೂಚಿಸುತ್ತದೆ. ಉದಾಹರಣೆಗೆ, ನೀರು ಎಂದರೆ ಶೂನ್ಯ. ಅದೇ ನದಿನೀರು, ಕೆರೆನೀರು, ಕಡಲನೀರು, ಸಿಹಿನೀರು, ಉಪ್ಪುನೀರು, ಮಳೆನೀರು ಎಂದೆಲ್ಲಾ ಹೇಳಿದಾಗ ಅಲ್ಲಿನ ವಿಶೇಷಣಗಳು ನೀರಿಗೆ ಸ್ವಭಾವವೊಂದನ್ನು ಒದಗಿಸಿ ಅದನ್ನು ಶೂನ್ಯವಲ್ಲದಂತಾಗಿಸಿ ಬಿಡುತ್ತದೆ. ಈ ಉಪಮೆಯ ಮೂಲಕ ಶೂನ್ಯವಾದದ ಈ ಹೊಸ ಸಮೀಕ್ಷೆಯನ್ನು ನಡೆಸುವ ತ್ರಿಪಾಠಿಯವರು ಹೇಳುವಂತೆ ತಾತ್ವಿಕವಾಗಿ ಶೂನ್ಯತತ್ವ ಬಹುಮುಖ್ಯವಾದ ಅಂಶವಾದರೂ ಪಂಚಸಖಾಗಳು ಇದನ್ನು ತಾತ್ವಿಕವಾಗಿ ಬಣ್ಣಿಸಿದ್ದಷ್ಟೇ ಅಲ್ಲದೆ ಮಾನವ ಜೀವನದೊಂದಿಗೆ ಅದರ ಅರ್ಥದ ಅಂತರ್ಯವನ್ನು ಬೆಸೆದು ದೈನಂದಿನ ಬದುಕಿನಲ್ಲಿ ಅಳವಡಿಸಿಕೊಳ್ಳುವ ಮೂಲಕ ದೂರಗಾಮಿಯಾದ ಐತಿಹಾಸಿಕ ಪರಿವರ್ತನೆಗಳಿಗೆ ಕಾರಣರಾದರು. ಈ ವಾದದಂತೆ ಮನುಷ್ಯರು ಶೂನ್ಯರು. ಅವರಲ್ಲಿ ಸ್ವಭಾವವಿರುವುದಿಲ್ಲ. ಇದೇ ಮಾನವರ ಮೂಲ ಹಾಗೂ ಸಹಜವಾದ, ಸತ್ಯವಾದ ಅವಸ್ಥೆ. ಒಮ್ಮೆ ಅದರಲ್ಲಿ ಗಂಡು, ಹೆಣ್ಣು, ಬಡವ, ಬಲ್ಲಿದ, ಬ್ರಾಹ್ಮಣ, ಶೂದ್ರ, ಇತ್ಯಾದಿಗಳನ್ನು ಗುರುತಿಸತೊಡಗಿದಾಗ ಶೂನ್ಯಾವಸ್ಥೆ ಇಲ್ಲದಂತಾಗಿ ತಮ್ಮದೇ ಸ್ವಭಾವ ಹೊಂದಿರುವ ಜಾತಿಭೇದ, ಮತಭೇದ, ಲಿಂಗಭೇದಗಳು ಹುಟ್ಟಿಕೊಳ್ಳುತ್ತವೆ. ಬೌದ್ಧಧರ್ಮದಿಂದ ಶೂನ್ಯತತ್ವವನ್ನು ತಮ್ಮ ಚಿಂತನೆಯಲ್ಲಿ ಅಳವಡಿಸಿಕೊಳ್ಳುತ್ತ ಪಂಚಸಖಾಗಳು ಈ ಎಲ್ಲ ತರಹದ ಭೇದ, ತಾರತಮ್ಯಗಳನ್ನು ಖಂಡಿಸಿ ಐಕ್ಯತೆಯನ್ನು ತಾತ್ವಿಕ ವಿಶ್ಲೇಷಣೆಯ ಬೆಂಬಲದೊಂದಿಗೇ ಪ್ರತಿಪಾದಿಸಿದರು ಎನ್ನುತ್ತಾರೆ ಮನೋರಮಾ ತ್ರಿಪಾಠಿ.[47]

ಶೂನ್ಯ ತತ್ವವು ಪಂಚಸಖಾದಿ ಸಂತರ ಚಿಂತನೆಯಲ್ಲಿ ಬಹುದೊಡ್ಡ ಸ್ಥಾನ ಪಡೆದಿದೆ. ಜಗನ್ನಾಥನನ್ನು ಅವರು ಶೂನ್ಯಪುರುಷನಾಗಿ ಕಾಣುತ್ತಾರೆ. ಅಚ್ಯುತಾನಂದದಾಸನ ಪ್ರಕಾರ ಶೂನ್ಯಪುರುಷ ಶೂನ್ಯಗೃಹದಲ್ಲಿ ಬಂಧಿಯಾಗಿದ್ದಾನೆ, (ಯಾವುದರಲ್ಲಿಯೂ ಕ್ರಿಯಾಶೀಲನಾಗಿರದೆ) ತಟಸ್ಥನಾಗಿದ್ದಾನೆ, ಮಾಯೆಯನ್ನು ರಚಿಸುತ್ತಾನೆ.[48] ಬಳರಾಮದಾಸನ ಮತದಲ್ಲಿ ಶೂನ್ಯಪುರುಷನಿಗೆ ರೂಪವಿಲ್ಲ, ರೇಖೆಯಿಲ್ಲ, ಅವನು ಶೂನ್ಯದೇಹಿ, ಅವನಿಗೆ ಹೆಸರುತಾನೇ ಯಾಕಿರಬೇಕು?[49] ತನ್ನ ಆತ್ಮಬೋಧಿನಿಯಲ್ಲಿ ಅಚ್ಯುತಾನಂದದಾಸನು ರೂಪ ಅರೂಪಗಳನ್ನು ಸಮನಾಗಿ ಕಂಡರೆ ಸಮತಾರೂಪದಲ್ಲಿ ಎಲ್ಲವನ್ನೂ ಪಡೆಯಬಹುದು ಎಂದಿದ್ದಾನೆ.[50] ಇದಕ್ಕೆ ಹೊಂದಿಕೊಳ್ಳುವಂತ ಮಾತನ್ನು ಚೈತನ್ಯದಾಸನೂ ಹೇಳಿದ್ದಾನೆ. ಅವನ ಮಾತಲ್ಲಿ ಶೂನ್ಯಗರ್ಭದಲ್ಲಿ ಅಲೇಖ, ಅಲೇಖಗರ್ಭದಲ್ಲಿ ಶೂನ್ಯ, ಅಲೇಖವೂ ಶೂನ್ಯವೂ ಸಮಾನ.[51] ಪ್ರಭುವು ನಿರಾಕಾರನು, ಅವನಿಗೆ ಆಕಾರವಿಲ್ಲ, ಆಕಾರ ಪಡೆದಿರುವುದು ಭಕ್ತರಿಗಾಗಿ ಮಾತ್ರ ಎನ್ನುತ್ತಾನೆ ಅಚ್ಯುತಾನಂದದಾಸ.[52]

ಆಕಾರವಿಲ್ಲದ, ಅಲೇಖವಾದ ಈ ಶೂನ್ಯಾವಸ್ಥೆಯನ್ನು ಮಾನವರ ಸಂದರ್ಭದಲ್ಲಿ ಅರ್ಥೈಸಿಕೊಳ್ಳುವುದು ಹೇಗೆ? ಈ ಪ್ರಶ್ನೆಗೆ ಚೈತನ್ಯದಾಸನಲ್ಲಿ ಉತ್ತರವಿದೆ. ಪಿಂಡದಿಂದ ಪ್ರಾಣ ಹೊರಟುಬಿಟ್ಟರೆ ಘಟವು ಮಹಾಶೂನ್ಯವಾಗಿಬಿಡುತ್ತದೆ, ಶೂನ್ಯಪುರುಷನ ಜೊತೆ ಹೋಗೋಣ, ಹುಡುಕಿದರೆ ಪತ್ತೆಯಾಗದಂತೆ, ಎನ್ನುತ್ತಾನೆ ಚೈತನ್ಯದಾಸ.[53] ಇಲ್ಲಿನ ಶೂನ್ಯ

ಚಿತ್ರಣ ಪ್ರಖರವಾದ್ದು. ದೇಹದಿಂದ ಪ್ರಾಣ ಹೊರಟಮೇಲೆ ಆ ದೇಹವು ಮಹಾಶೂನ್ಯ. ಅಂದರೆ, ಅಲ್ಲಿ ಮುಂದೆ ಗಂಡಿಲ್ಲ, ಹೆಣ್ಣಿಲ್ಲ, ಮೇಲುಕೀಳಿಲ್ಲ, ಬಡವಬಲ್ಲಿದನಿಲ್ಲ, ಬ್ರಾಹ್ಮಣಚಂಡಾಳನಿಲ್ಲ. ಅದು ಬರಿಯ ಪಿಂಡ. ಇದುವೇ ಒಡಿಯಾ ಸಂತರು ಬೌದ್ಧಧರ್ಮದ ಪ್ರೇರಣೆಯಿಂದ ಪ್ರತಿಪಾದಿಸಿದ ಶೂನ್ಯತತ್ವ. ಶೂನ್ಯಪುರುಷನು ಈ ತತ್ವವನ್ನು ಪ್ರತಿನಿಧಿಸುತ್ತಾನೆ, ರೂಪಕವಾಗಿ, ಅಥವಾ ಅಮೂರ್ತವನ್ನರಿಯದ ಭಕ್ತರಿಗೆಂದು ಮೂರ್ತವಾಗಿ. ಆ ಶೂನ್ಯಪುರುಷನಲ್ಲಿ ಭೇದಗಳಿಗೆ ಸ್ಥಾನವಿಲ್ಲ.

ಈ ಶೂನ್ಯಮೀಮಾಂಸೆಯನ್ನು ಮುಂದಿಟ್ಟ ಸಂತರು ಪ್ರಭುತ್ವದ ದೃಷ್ಟಿಯಲ್ಲಿ ಅರ್ಚಕವರ್ಗವನ್ನು ಸದೆಬಡಿಯಲು ಉತ್ತಮ ಆಯುಧಗಳಾಗಿ ಕಂಡುಬಂದಿರಬಹುದು. ಆದ್ದರಿಂದಲೇ ಗಜಪತಿ ಪ್ರತಾಪರುದ್ರನು ಪಂಚಸಖಾರನ್ನು ಪ್ರೋತ್ಸಾಹಿಸಲು ಮುಂದಾದ. ಚೈತನ್ಯನ ಪೋಷಕನೂ ಆಗಿದ್ದ ಇವನಿಗೆ ಅಂದಿನ ಜನಜೀವನದೊಂದಿಗೆ ಸ್ಪಂದಿಸಬಲ್ಲ ಸಂತರು ಅಮೂಲ್ಯ ಸಾಧನಗಳಾಗಿದ್ದರು.

ತಾತ್ವಿಕ ಸ್ಥರದಲ್ಲಿ ಸಂತರು ಪ್ರತಿಪಾದಿಸಿದ ಸಮಾನತೆಯು ಅವರ ಕಥನಗಳಲ್ಲಿಯೂ ಅಭಿವ್ಯಕ್ತಿ ಪಡೆದಿತ್ತು. ಅದರ ಶ್ರೇಷ್ಠ ನಿದರ್ಶನವನ್ನು ಬಳರಾಮದಾಸನ ಲಕ್ಷ್ಮೀಪುರಾಣದಲ್ಲಿ ಕಾಣುತ್ತೇವೆ. ಇದೊಂದು ವಿಶಿಷ್ಟ ಕೃತಿ. ಸಾಂಪ್ರದಾಯಿಕತೆಯನ್ನು ಎತ್ತಿಹಿಡಿಯುವ ಹಾಗೂ ಎತ್ತಿ ದೂರಕ್ಕೆಸೆಯುವ ಎರಡೂ ಮನೋಧರ್ಮಗಳು ಈ ಕೃತಿಯಲ್ಲಿವೆ.

ಲಕ್ಷ್ಮೀಪುರಾಣ ಪರಾಶರಮಹರ್ಷಿಯು ನಾರದನಿಗೆ ಮಹಾಲಕ್ಷ್ಮಿವ್ರತದ ಮಹಿಮೆಯನ್ನು ತಿಳಿಹೇಳಲು ಕಥಾನಕದಂತೆ ರಚಿಸಲಾಗಿದೆ. ಕೃತಿಯ ಮೊದಲ ಭಾಗದಲ್ಲಿ ಸುಮಂಗಲಿಯರ ಕರ್ತವ್ಯಗಳ ವರ್ಣನೆಯಿದೆ. ಮನೆಯನ್ನು ಶುಭ್ರವಾಗಿಟ್ಟು ನೋಡಿಕೊಳ್ಳುವುದು, ಅಡುಗೆ, ಮಕ್ಕಳ ಆರೈಕೆ, ಗಂಡ, ಅತ್ತೆಮಾವಂದಿರನ್ನು ದೇವತೆಗಳಂತೆ ಪೂಜಿಸುವುದು, ಪೂಜೆಪುನಸ್ಕಾರಗಳನ್ನು ಕೈಗೊಳ್ಳುವುದು, ಗುರುಹಿರಿಯರ, ಸಾಧುಸಂತರ ಸೇವೆ ನಡೆಸುವುದು, ಹೀಗೆ ಸುಮಂಗಲಿಯು ಮಾಡಬೇಕಾದ ಕಾರ್ಯಗಳನ್ನು ಸವಿಸ್ತಾರ ವಿವರಿಸಲಾಗಿದೆ. ಲಕ್ಷ್ಮೀಮಾತೆಯ ಕೃಪೆಯು ಎಂಥ ಹೆಣ್ಣಿಗೆ ದಕ್ಕದು ಎಂಬುದನ್ನೂ ಬಳರಾಮದಾಸ ಹೇಳಿದ್ದಾನೆ. ಅಂಥ ಹೆಣ್ಣುಗಳಲ್ಲಿ ರಾತ್ರಿ ಮೊಸರು ಸೇವಿಸುವವಳು, ಮತ್ತು ಹಜಾಮನ ಅಂಗಡಿಗೆ ಹೋಗಿ ಚೌರ ಮಾಡಿಸಿಕೊಳ್ಳುವವಳು ಸೇರಿದ್ದಾಳೆ ಎಂಬುದು ಓದುಗರನ್ನು ಸೆಳೆಯುತ್ತದೆ!

ಒಂದರ್ಥದಲ್ಲಿ ಬಳರಾಮದಾಸನು ಸುಮಂಗಲಿ ಮಾಡಬೇಕಾದ್ದೆಲ್ಲವೂ ಆಕೆಯ ಹಕ್ಕು ಎಂಬಂತೆ ವಿಷಯವನ್ನು ಪ್ರತಿಪಾದಿಸಿದ್ದಾನೆ. ಮನೆಯ ಒಳಗೆ ಸುಮಂಗಲಿಯದೇ ಸಾರ್ವಭೌಮತ್ವ, ಆಕೆಯದೇ ದರ್ಬಾರು, ಅದು ಅವಳ ವ್ಯಕ್ತಿತ್ವ ಅನಾವರಣಗೊಳ್ಳುವ ಆವರಣ ಎಂಬಂತೆ ಸಂತಕವಿ ಇದನ್ನು ವಿವರಿಸಿದ್ದಾನೆ. ಗಂಡ, ಅತ್ತೆಮಾವಂದಿರ ಪಾದಕ್ಕೆರಗುವುದು ಸುಮಂಗಲಿಯ ಅಧಿಕಾರ, ಅದನ್ನು ಗಂಡ, ಅತ್ತೆಮಾವಂದಿರೂ ತಡೆಯುವಂತಿಲ್ಲ ಎನ್ನಿಸುವ ಧಾಟಿಯಲ್ಲಿ ಈ ವರ್ಣನೆ ನಡೆದಿದೆ. ಹೆಣ್ಣೊಬ್ಬಳನ್ನು ಮನೆಯ ನಾಲ್ಕು ಗೋಡೆಗಳಲ್ಲಿ ಬಂಧಿತಳಾಗಿಸುವುದಕ್ಕೂ ಈ ನೆಪವೇ ಸಾಕೆಂಬುದು ಇಲ್ಲಿನ ವಿಪರ್ಯಾಸ.

ಕೃತಿಯ ಎರಡನೆಯ ಭಾಗದಲ್ಲಿ ಕಥನದ ಸ್ವರೂಪ ಬದಲಾಗುತ್ತದೆ. ಒಮ್ಮೆ ಲಕ್ಷ್ಮೀಮಾತೆಯು ಪುರಿ ನಗರದ ಭ್ರಮಣಕ್ಕೆ ಹೊರಡುತ್ತಾಳೆ. ತನ್ನ ಭಕ್ತರನ್ನು ಸಲಹುವುದೇ ಈ ವಿಹಾರದ ಉದ್ದೇಶ. ಪತಿಯಾದ ಜಗನ್ನಾಥನ ಅಪ್ಪಣೆ ಪಡೆದೇ ಆಕೆ ಹೋಗುವುದು. ಲಕ್ಷ್ಮೀಪೂಜೆಯನ್ನು ಕೈಗೊಳ್ಳದ ಉನ್ನತ ಜಾತಿಯ ಹೆಣ್ಣುಮಕ್ಕಳಿಗೆ ಅದರ ಮಹತ್ವವನ್ನು ತಿಳಿಹೇಳಿ ಮುಂದೆ ಸಾಗುವ ಲಕ್ಷ್ಮಿ ಕೊನೆಗೆ ಶ್ರಿಯಾ ಎಂಬ ಚಂಡಾಳ ಹೆಣ್ಣಿನ ಮನೆಯೆದುರಿಗೆ ಬರುತ್ತಾಳೆ. ಮನೆಯನ್ನು ಅತಿಶುಭ್ರವಾಗಿಟ್ಟು ತನ್ನನ್ನು ನಿಷ್ಠೆಯಿಂದ ಪೂಜಿಸುತ್ತಿರುವ ಶ್ರಿಯಾಳನ್ನು ಕಂಡ ಆಕೆ ಪ್ರಸನ್ನಳಾಗುತ್ತಾಳೆ. ಚಂಡಾಳಿನಿಯ ಮನೆಯಲ್ಲಿ ಉಂಡು ಅವಳ ಅಭೀಷ್ಟದಂತೆ ಎಲ್ಲ ಐಶ್ವರ್ಯವನ್ನೂ ಕರುಣಿಸಿ ಲಕ್ಷ್ಮೀಮಾತೆ ದೇವಾಲಯಕ್ಕೆ ಮರಳಿಬರುತ್ತಾಳೆ. ಈ ನಡುವೆ ಜಗನ್ನಾಥನು ಅಣ್ಣ ಬಲಭದ್ರನೊಂದಿಗೆ ಬೇಟೆಗೆ ಹೋಗಿರುತ್ತಾನೆ. ಮಹಾಯೋಗಿಯಾದ ಬಲಭದ್ರ ಯೌಗಿಕ ಶಕ್ತಿಯಿಂದ ಲಕ್ಷ್ಮಿಯು ಚಂಡಾಳಿನಿಯ ಮನೆಯಲ್ಲಿ ಅನ್ನಗ್ರಹಣ ಮಾಡಿದ ಸಂಗತಿಯನ್ನು ತಿಳಿದು ಕಿಡಿಕಿಡಿಗೊಳ್ಳುತ್ತಾನೆ. ಆಕೆ ಮರಳಿಬರುವ ವೇಳೆಗೆ ಅಣ್ಣತಮ್ಮಂದಿರುಬ್ಬರೂ ದೇವಾಲಯದ ಬಾಗಿಲಲ್ಲಿ ನಿಂತಿರುತ್ತಾರೆ. ಲಕ್ಷ್ಮಿಯನ್ನು ಒಳಕ್ಕೆ ಬರಮಾಡಿಕೊಳ್ಳುವ ಮನಸ್ಸು ಜಗನ್ನಾಥನದು. ಆದರೆ ಅಣ್ಣ ಮುನಿದಿದ್ದಾನೆ. ಅವನ ಮಾತನ್ನು ಹೇಗೆ ಲಂಘಿಸುವುದು? ಅದರಂತೆ ಲಕ್ಷ್ಮೀಮಾತೆಗೆ ದೇವಾಲಯದೊಳಕ್ಕೆ ಪ್ರವೇಶ ನಿಷೇಧಿಸಲಾಗುತ್ತದೆ. ಲಕ್ಷ್ಮಿ ಅಲ್ಲಿಂದ ಹೊರಟುಬಿಡುತ್ತಾಳೆ. ಸಾಗರದ ದಂಡೆಯಲ್ಲಿ ದೊಡ್ಡ ಮಹಲೊಂದನ್ನು ನಿರ್ಮಿಸಿ ಅಲ್ಲಿ ಓರ್ವ ಸೇವಕಿಯೊಂದಿಗೆ ವಾಸವಾಗುತ್ತಾಳೆ. ಲಕ್ಷ್ಮಿ ಬೆನ್ನುತೋರಿ ಹೊರಟಮೇಲೆ ಮುಂದೆ ಗತಿಯುಂಟೇ? ದೇವಾಲಯದ ಐಶ್ವರ್ಯ ಕೊನೆಗೊಳ್ಳತೊಡಗುತ್ತದೆ. ಆದಾಯ, ವರಮಾನಗಳು ಇಲ್ಲದಂತಾಗಿ ಕೊನೆಗೆ ಒಲೆಯೇ ಉರಿಯದ ಪರಿಸ್ಥಿತಿ ಉದ್ಭವಿಸುತ್ತದೆ. ಆಗ ಅಣ್ಣತಮ್ಮಂದಿರಿಬ್ಬರೂ ಬ್ರಾಹ್ಮಣ ವೇಷ ತೊಟ್ಟು ಭಿಕ್ಷೆಗೆ ಹೊರಡುತ್ತಾರೆ. ವಿಚಿತ್ರವೆಂದರೆ, ಎಲ್ಲಿಯೂ ಅವರಿಗೆ ಭಿಕ್ಷೆ ಸಿಗುವುದಿಲ್ಲ. ಎಲ್ಲರೂ ಅವರನ್ನು ಗೇಲಿಮಾಡುತ್ತಾರೆ ಅಥವಾ ಬೈದು ಓಡಿಸುತ್ತಾರೆ. ಭಿಕ್ಷೆ ನೀಡಲು ಬಂದವರಿಗೆ ಏನಾದರೊಂದು ಕಾರಣದಿಂದ ನೀಡಲು ಸಾಧ್ಯವಾಗದಂತಾಗುತ್ತದೆ. ಕೊನೆಗೆ ದಣಿದು ಕಂಗಾಲಾದ ಜಗನ್ನಾಥ, ಬಲಭದ್ರರು ಸಮುದ್ರತೀರದ ಆ ದೊಡ್ಡ ಮನೆಯೆದುರು ಬಂದು ಭಿಕ್ಷೆ ಯಾಚಿಸುತ್ತಾರೆ. ಲಕ್ಷ್ಮೀಮಾತೆಯ ಆದೇಶದಂತೆ ಅವಳ ಸೇವಕಿ ಬಂದು ಭಿಕ್ಷೆ ನೀಡಲು ನಾವು ಸಿದ್ಧರಿದ್ದೇವೆ, ಆದರೆ ನಾವು ಚಂಡಾಳರು, ನಮ್ಮಲ್ಲಿ ಉಂಡರೆ ನೀವು ಭ್ರಷ್ಟರಾಗುತ್ತೀರಿ ಎನ್ನುತ್ತಾಳೆ. ಆಗ ಭಿಕ್ಷುಕರಿಬ್ಬರೂ ಈಗ ನಾವು ಯಾವ ಪ್ರತಿಬಂಧವನ್ನೂ ಪಾಲಿಸುವ ಸ್ಥಿತಿಯಲ್ಲಿಲ್ಲ, ಹಸಿದು ಪ್ರಾಣವೇ ಹೋಗುತ್ತಿದೆ, ಯಾರ ಕೈಯಿಂದಾದರೂ ಉಣ್ಣಲು ಸಿದ್ಧ ಎನ್ನುತ್ತಾರೆ. ಆಗ ಲಕ್ಷ್ಮೀಮಾತೆ ಅಲ್ಲಿಗೆ ಬಂದು ಜಗನ್ನಾಥ, ಬಲಭದ್ರರಿಗೆ ತನ್ನ ನಿಜರೂಪ ತೋರಿ ಭಕ್ತಿಯಿಂದ ಮತ್ತು ವಿಧಿವತ್ತಾಗಿ ಅವರ ಸೇವೆ ಮಾಡಿ ಉಣ್ಣಲು ಇಡುತ್ತಾಳೆ. ಅಣ್ಣತಮ್ಮಂದಿರು ಆಕೆಯನ್ನು ಮಂದಿರಕ್ಕೆ ಮರಳಿಬರಲು ಬೇಡಿಕೊಂಡಾಗ ಲಕ್ಷ್ಮೀಮಾತೆ ಹೇಳುತ್ತಾಳೆ, ಇಂದಿನಿಂದ ದೇವಾಲಯದಲ್ಲಿ ಯಾವ ರೀತಿಯ ಭೇದವೂ ಇರಬಾರದು, ಎಲ್ಲ ಜಾತಿಯವರಿಗೂ ಅಲ್ಲಿ ಪ್ರವೇಶವಿರಬೇಕು, ಎಲ್ಲರೂ ಒಟ್ಟಿಗೆ ಕುಳಿತು ಉಣ್ಣಬೇಕು, ಯಾವುದೇ ಬಗೆಯ ತಾರತಮ್ಯ ಕಂಡುಬರಬಾರದು, ಇದಕ್ಕೆ ಒಪ್ಪಿದರೆ ಬರುತ್ತೇನೆ. ಅಣ್ಣತಮ್ಮಂದಿರು ಅದಕ್ಕೆ ಒಪ್ಪಿಕೊಳ್ಳುತ್ತಾರೆ. ಲಕ್ಷ್ಮೀಮಾತೆ ದೇವಾಲಯಕ್ಕೆ ಮರಳಿಬರುತ್ತಾಳೆ.[೨೬]

ಈ ಕಥೆಯನ್ನಾಧರಿಸಿ ಮನೋರಮಾ ತ್ರಿಪಾಠಿಯವರು ಹಿಂದೆ ಪುರಿಯ ದೇವಾಲಯದಲ್ಲಿ ಕೆಳಜಾತಿಯವರಿಗೆ ಪ್ರವೇಶ ಇರಲಿಲ್ಲ, ಪಂಚಸಖಾರ ಕಾಲದಲ್ಲಿ, ಬಹುಶಃ ಅವರ ಪ್ರಯತ್ನದಿಂದ, ಎಲ್ಲ ಜಾತಿಯವರಿಗೂ ಪ್ರವೇಶ ದೊರಕಿತು, ಲಕ್ಷ್ಮೀಪುರಾಣ ಅದರ ರೂಪಕವಾಗಿದೆ ಎಂದು ವಾದಿಸಿದ್ದಾರೆ.[55]

ಶೂದ್ರಜಾತಿಗಳ ಬಗ್ಗೆ ಪಂಚಸಖಾರಿಗಿದ್ದ ಅನುಕಂಪವನ್ನು ಅವರ ಸಾಹಿತ್ಯದಿಂದ ತಂದ್ರಾ ಪಟ್ನಾಯಕ್ ಅವರು ಬೆಳಕಿಗೆ ತಂದಿದ್ದಾರೆ.[56] ಅಚ್ಯುತಾನಂದದಾಸನು ಬರ್ಣಟೀಕಾ ಕೃತಿಯಲ್ಲಿ ಶೂದ್ರನಾಗಿ ಸೇವೆ ಸಲ್ಲಿಸುವಂತಾಗಲಿ, ಶೂದ್ರರ ದೇಹದಲ್ಲಿ ಅಹಂಕಾರವಿಲ್ಲ ಎಂದಿದ್ದಾನೆ.[57] ಬಳರಾಮದಾಸನ ಪ್ರಕಾರ ಹರಿಯು ವಿಪ್ರ ಚಂಡಾಳಾದಿ ಎಲ್ಲ ಭಕ್ತರಿಗೂ ಸೇರಿದವನು, ಜಗನ್ನಾಥನು ಕರುಣಾಮಯನು, ಅವನ ಮೇಲೆ ಯಾರದೂ ಏಕಾಧಿಕಾರವಿಲ್ಲ.[58] ವಿಪ್ರನಾಗುವ ಆಸೆ ನನಗಿಲ್ಲ, ಕ್ಷತ್ರಿಯ ವೈಶ್ಯರ ಮೇಲೆ ನಂಬಿಕೆಯಿಲ್ಲ, ಸಣ್ಣವನಾಗಿದ್ದರೆ ಮನವು ಶಾಂತ, ಶೂದ್ರವರ್ಣದಿಂದಲೇ ಅಚ್ಯುತ ಎನ್ನುತ್ತಾನೆ ಅಚ್ಯುತಾನಂದದಾಸ.[59]

ಹೀಗೆ ಪಂಚಸಖಾರೊಂದಿಗೆ ಜಗನ್ನಾಥ ಪರಂಪರೆ ಹೊಸ ಎತ್ತರಕ್ಕೇರಿತು. ಜಗನ್ನಾಥನನ್ನೇ ಭಿಕ್ಷೆ ಎತ್ತಿಸುವ ಮತ್ತು ಆ ಭಿಕ್ಷೆ ಎತ್ತಿಸುವ ವೃತ್ತಾಂತವನ್ನು ಕೊಂಡಾಡುವ ಈ ಬೆಳವಣಿಗೆ ಅದೇ ಕಾಲಕ್ಕೆ ಯೂರೋಪಿನಲ್ಲಿ ಕ್ಯಾಥಲಿಕ್ ಚರ್ಚಿನ ವಿರುದ್ಧ ಬಂಡೆದ್ದು ಪ್ರೊಟೆಸ್ಟೆಂಟ್ ಮತಕ್ಕೆ ಚಾಲನೆ ನೀಡಿದ ಮಾರ್ಟಿನ್ ಲೂಥರ್‌ನ ಬಂಡಾಯಕ್ಕಿಂತ ತೀವ್ರವೂ ಮಾರ್ಮಿಕವೂ ಆಗಿತ್ತು. ಲೂಥರ್ ನನ್ನು ವ್ಯಾಟಿಕನ್ ತನ್ನಲ್ಲಿ ಅರಗಿಸಿಕೊಳ್ಳಲಿಲ್ಲ, ಪಂಚಸಖಾರನ್ನು ಜಗನ್ನಾಥ ದೇವಾಲಯವು ತನ್ನ ವಿಶಾಲ ಗರ್ಭದೊಳಕ್ಕೆ ಸೆಳೆದುಕೊಂಡಿತು. ಹಾಗೆ ಮಾಡುವ ಮೂಲಕ ತನ್ನನ್ನೇ ಪರಿವರ್ತನೆಗೆ ಒಡ್ಡಿಕೊಂಡಿತು. ಇದೇ ಪಂಚಸಖಾರ ಗೆಲುವು. ಅವರ ಸೋಲೂ ಇದೇ ಆಗಿದೆ.

## ಕೊನೆ ಟಿಪ್ಪಣಿ

1. ಇದರ ಕೂಲಂಕುಶ ಚರ್ಚೆಗೆ ನೋಡಿ, Hermann Kulke, 'King Anangabhima III, the Veritable Founder of the Gajapati Kingship and the Jagannath Trinity at Puri', *Journal of the Royal Asiatic Society of Britain and Ireland*, 1, 1981, pp. 26-39.
2. *Epigraphia Indica*, 33, p. 96.
3. ಈ ಲೇಖನದೊಂದಿಗಿನ ಚಿತ್ರ ನೋಡಿ.
4. *Epigraphia Indica*, 5, p. 35.
5. P. Acharya, 'The Commemorative Inscription of the Ananta Vasudeva Temple at Bhubaneswar', *Orissa Historical Research Journal*, 1 (4), 1953, pp. 274-288.
6. *Epigraphia Indica*, 33, p. 94, ಟಿಪ್ಪಣಿ 2ರಲ್ಲಿನ ಡಿ.ಸಿ. ಸರ್ಕಾರ್ ಅವರ ಹೇಳಿಕೆಯನ್ನು ನೋಡಿ.

7. Eschmann, Kulke & Tripathi, ಪೂರ್ವೋಕ್ತ, pp. 164, (ಗಗನೇಂದ್ರ ನಾಥ್ ದಾಸ್ ಅವರ ಲೇಖನ).
8. ಅಲ್ಲೇ, ಪುಟ–165.
9. ಅಲ್ಲೇ, ಪುಟ–161.
10. ಅಲ್ಲೇ, ಪುಟ–165.
11. ಅಲ್ಲೇ.
12. ವಿಸ್ಥಿತೀಕರಣ (reification) ಕುರಿತ ಸೈದ್ಧಾಂತಿಕ ಚರ್ಚೆಗೆ ನೋಡಿ, Georg Lukācs, *History and Class Consciousness: Studies in Marxist Dialecties*, Translated by Rodney Livingstone, Merlin Press, London, pp.83-222.
13. ಸ್ಕಂದಪುರಾಣ, 2.2.
14. ಬ್ರಹ್ಮಪುರಾಣ, 41–68; ನಾರದಪುರಾಣ, 52–61.
15. J.L.Shastri (ed), *Ancient Indian Tradition and Mythology, Volume 19, the Nārada-Purāṇ, Part V,* Translated and Annotated by Ganesh Vasudev Tagare, Motilal Banarsidass, Delhi, [1982] 1998, pp.1850, n.1.
16. ಮಹಾಭಾರತ, ಮುಷಳೀಪರ್ಬ, 12.
17. Eschmann, Kulke & Tripathi, ಪೂರ್ವೋಕ್ತ, pp. 167.
18. ಈ ಕೃತಿಯಲ್ಲಿ ಕೃಷ್ಣನ ಹೆಸರನ್ನು ದಶಾವತಾರದ ಪಟ್ಟಿಯಲ್ಲಿ ಕಾಣೆವು. ಬದಲಿಗೆ ಅವನು ಅವತಾರವಾಗಿರದೆ ಅವತಾರಿಯೇ ಆಗಿದ್ದಾನೆ. ಈ ಶ್ಲೋಕವನ್ನು ಗಮನಿಸಿ: "ವೇದಾನುದ್ಧರತೇ ಜಗನ್ನಿವಹತೇ ಭೂಗೋಲಮುದ್ಬಿಭ್ರತೇ / ದೈತ್ಯಂ ದಾರಯತೇ ಬಲಿಂ ಛಲಯತೇ ಕ್ಷತ್ರಕ್ಷಯಂ ಕುರ್ವತೇ / ಪೌಲಸ್ತ್ಯಂ ಜಯತೇ ಹಲಂ ಕಲಯತೇ ಕಾರುಣ್ಯಮಾತನ್ವತೇ / ಮ್ಲೇಚ್ಛಾಂ ಮೂರ್ಛಯತೇ ದಶಾಕೃತಿಕೃತೇ ಕೃಷ್ಣಾಯ ತುಭ್ಯಂ ನಮಃ", *ಗೀತಗೋವಿಂದ*, 1.11.
19. *ಗೀತಗೋವಿಂದ*, 1.9.
20. "ಬುದ್ಧೋನಾಮ್ನಾಂಜನಸ್ತತಃ / ಕೀಕಟೇಷು ಭವಿಷ್ಯತಿ", *ಭಾಗವತಪುರಾಣ*, 1.30.243.
21. "ಮಹೋದಧಿ ತೀರೇ ಬಡದೇವುಳರೇ ಬಸಿ / ದರಿದ್ರಮಾನಂಕ ದುಃಖಿ ದೇಖುಅಚಿ ಧ್ವಂಸಿ / ಬುದ್ಧರೂಪರೇ ಕಲಿಜುಗೇ ಅವತಾರ / ಹೊಯ್ಣ ಪಾಪಿಜನಂಕು ಕರುಚಿ ಉದ್ಧಾರ", ಮಹಾಭಾರತ, ಮಧ್ಯಪರ್ಬ.
22. "ಕಲಿಜುಗೇ ರಹಿಬಾಕು ಕಿಚಿ ದಿನ ಇಚ್ಛಾ / ಬೌದ್ಧ ಅಬತಾರೇ ನಿಶ್ಚೇ ಬಿಹಾರಿಬು", ಮಹಾಭಾರತ, ಮುಷಳೀಪರ್ಬ.
23. "ದ್ವಾಪರ ಜುಗ ಶೇಷರೇ ದೇಬ ಜಗನ್ನಾಥ / ಬೌದ್ಧರೂಪರೇ ಬಿಜೇ ಕರಿಬೇ", ಮಹಾಭಾರತ, ಸಭಾಪರ್ಬ.
24. "ಸಂಸಾರ ಜನಂಕು ತಾರಿಬಾ ನಿಮಂತೇ / ಬೌದ್ಧರೂಪೇ ಬಿಜಯ ಕರಿಚಂತಿ ಜಗನ್ನಾಥೇ" ಮಹಾಭಾರತ, ಮಧ್ಯಪರ್ಬ.
25. "ಬಳಭದ್ರ ಸುಭದ್ರಾ ಏ ಕೃಷ್ಣ ತೀನೀ ರೂಪ / ಬೌದ್ಧರೂಪರೇ ದೇಲೇ ಏಮಂತ ಸ್ವರೂಪ" ಮಹಾಭಾರತ, ವನಪರ್ಬ.

26. ಸೂರ್ಯವಂಶಿಗಳ ಕುರಿತು ಮಾಹಿತಿಗೆ ನೋಡಿ, R. Subrahmanyam, The Sūryavaṁśi Gajapatis of Orissa, Andhra University, Waltair, 1957. ಅಲ್ಲದೆ ಗಮನಿಸಿ, Prabhat Mukherjee, The History of the Gajapati Kings of Orissa and Their Successors, General Trading Company, Calcutta, 1953.
27. A.B. Mahanti (ed), Mādaḷā Pāñji, Prachi Samiti, Cuttack, 1940, pp. 42 ಮುಂದುವರೆದು.
28. Eschmann, Kulke & Tripathi, ಪೂರ್ವೋಕ್ತ, pp. 209–212.
29. ಇಲ್ಲೇ, pp. 209–210.
30. ಇಲ್ಲೇ.
31. ಇಲ್ಲೇ.
32. Eschmann, Kulke & Tripathi, ಪೂರ್ವೋಕ್ತ, pp. 205, (ಕುಲ್ಕ ಅವರ ಲೇಖನ).
33. K.B. Tripathy, The Evolution of Oriya Language and Script, Utkal University, Bhubaneswar, 1962, p. 254.
34. A.B. Mahanti (ed), ಪೂರ್ವೋಕ್ತ, pp. 46 ಮುಂದುವರೆದು.
35. Eschmann, Kulke & Tripathi, ಪೂರ್ವೋಕ್ತ, pp. 213, (ದಾಸ್ ಅವರ ಲೇಖನ).
36. ಇಲ್ಲೇ, pp. 482, (ತ್ರಿಪಾಠಿ ಅವರ ಲೇಖನ).
37. A.B. Mahanti (ed), Mādaḷā Pāñji, Prachi Samiti, Cuttack, 1940, pp. 50 ಮುಂದುವರೆದು. ಈ ಕಥೆಯ ಚಾರಿತ್ರಿಕ ಮಹತ್ವದ ಕುರಿತು ಚರ್ಚೆಗೆ ನೋಡಿ, Eschmann, Kulke & Tripathi, ಪೂರ್ವೋಕ್ತ, pp. 213, (ದಾಸ್ ಅವರ ಲೇಖನ).
38. ಪಂಚಸಖಾರ ಬಗ್ಗೆ ಚರ್ಚೆಗೆ ನೋಡಿ, Basanta Kumar Mallick, *Medieval Orissa: Literature, Society, Economy*, Mayur Publications, Bhubaneswar, 1996.
39. ಈ ಕುರಿತ ಸಣ್ಣ ಟಿಪ್ಪಣಿಗೆ ನೋಡಿ, Sumanyu Satpathy, "Jagannath Das (Oriya)" in Ruth Vanita and Saleem Kidwai, *Same Sex Love in India: A Literary History*, revised and updated, Penguin, New Delhi, 2008.
40. "ಜೋಯ್ಲೀ ಅಚ್ಯುತ ತುಂಭೇ ಶುಣ ಆಂಭ ವಾಣೀ / ಕಲಿಜುಗೇ ಬೌದ್ಧರೂಪೇ ಪ್ರಕಾಶಿಲು ಪುಣಿ / ಕಲಿಜುಗೇ ಬುದ್ಧರೂಪ ನಿಜರೂಪ ಗೋಪ್ಯ", ಶೂನ್ಯಸಂಹಿತ, 9.
41. ನಿರ್ಗುಣಮಾಹಾತ್ಮ್ಯ, 16.
42. "ಪ್ರಬುದ್ಧಬುದ್ಧ ಅಬತಾರೇ ಹರಿ ಜನ್ಮಿಲೇ ಸಂಸಾರೇ", ಇಲ್ಲೇ.
43. "ಬೌದ್ಧರೂಪೇ ನೀಲಗಿರಿ ಶ್ರೀ ಜಗನ್ನಾಥ ಬಿಜೇ ಕರಿ / ಬೌದ್ಧ ನೀಳಾದ್ರಿಗೋಸಾಇ ಬಸಿಚಿ ಯೋಗಾರೂಢ ಹೋಇ / ಕಾಠಪಾಷಾಣ ರೂಪ ಧರಿ ದಾರುಬ್ರಹ್ಮರೇ ಬಿಜೇ ಕರಿ / ಕೆತೇಹೇ ಜುಗ ಜಾಇಚಿ ಬೌದ್ಧ ಅಬತಾರ ಅಚಿ / ಬೌದ್ಧಪ್ರಭು ನಿರಾಕಾರ ಹೋಇಲೇ ದಶ ಅಬತಾರ / ಜೆತೇಕ ಅಬತಾರ ಶ್ರೇಣೀ ಬೌಹು ಆತಜಾತ ಪುಣಿ", Tandra Patnaik, ಪೂರ್ವೋಕ್ತ, pp. 115.
44. ನೀಲಾದ್ರಿ ಮಹೋದಯ, 6.22.
45. Tandra Patnaik, ಪೂರ್ವೋಕ್ತ.
46. ಉದಾಹರಣೆಗೆ, ಇಲ್ಲೇ, ಭಾಗ ಎರಡನ್ನು ನೋಡಿ.

47. ಈ ವಾದವನ್ನು ಮನೋರಮಾ ತ್ರಿಪಾಠಿಯವರು ಇದೀಗ ತಾವು ಉತ್ಕಲ್ ಯೂನಿವರ್ಸಿಟಿ ಆಫ್ ಕಲ್ಚರ್ ನಲ್ಲಿ The Ethical Impact of Buddhism on Odishan Culture ವಿಷಯದಲ್ಲಿ ಕೈಗೊಂಡಿರುವ ಪಿ.ಎಚ್.ಡಿ. ಮಹಾಪ್ರಬಂಧದಲ್ಲಿ ಮಂಡಿಸುತ್ತಿದ್ದಾರೆ. ತಮ್ಮ ವಾದವನ್ನು ನನ್ನೊಂದಿಗೆ ಹಂಚಿಕೊಂಡ ಅವರಿಗೆ ನನ್ನ ಕೃತಜ್ಞತೆಗಳು.
48. "ಶೂನ್ಯಪುರುಷ ಶೂನ್ಯಘರೇ ಬಂಧೀ / ಶೂನ್ಯಪುರುಷ ಉದಾಸರೇ ರಹೇ / ಶೂನ್ಯಪುರುಷ ಸಬು ಮಾಯಾ ಛಾಯೇ", *ಶೂನ್ಯಸಂಹಿತ*, 9.
49. "ಜಾಹಾರ ರೂಪರೇಖ ನಾಹಿ / ಶೂನ್ಯಪುರುಷ ಶೂನ್ಯದೇಹೀ / ಶೂನ್ಯರೇ ಬ್ರಹ್ಮ ಸಿನಾ ಥಾ / ಆಭರ ನಾಮ ಥಿಬಾ ಕಾಹಿ", *ವಿರಾಟಗೀತ*, 1.
50. "ರೂಪ ಅರೂಪಕು ಸಮ ಕರಿಥಿಬು / ಸಮತಾ ರೂಪರೇ ಸಬು ಪಾಇಬು", *ತತ್ವಬೋಧಿನಿ*, 1.
51. "ಶೂನ್ಯಗರ್ಭೇ ಅಳೇಖ ಅಳೇಖಗರ್ಭೇ ಶೂನ್ಯ / ಅಳೇಖಪುರುಷ ಶೂನ್ಯ ಅಟೇಇ ಸಮಾನ", *ವಿಷ್ಣುಗರ್ಭಪುರಾಣ*, 3.
52. "ನಿರಾಕಾರ ಪ್ರಭು ಆಕಾರ ನಾಹಿ ಆಕಾರ ಹೊಇಚಿ ಭಕತ ಪಾಇ", *ಚೌರಾಶಿ ಜಂತ್ರ*.
53. "ಪಿಂಡರು ಛಾಡಿಗಲೇ ಪ್ರಾಣ ಸೇ ಘಟ ಹಬ ಮಹಾಶೂನ್ಯ / ಶೂನ್ಯಪುರುಷ ಸಂಗೇ ಜಿಬಾ ಖೋಜಿಲೇ ಅಉ ನ ಪಾಇಬ", *ನಿರ್ಗುಣ ಮಾಹಾತ್ಮ್ಯ*, 16.
54. ಲಕ್ಷ್ಮೀಪುರಾಣ ಕುರಿತ ಚರ್ಚೆಗೆ ನೋಡಿ, Satya P. Mohanty, 'Alternative Modernities and Medieval Indian Literature: The Oriya Lakshmi Purana as Radical Pedagogy', *Diacritics*, 38 (3), 2008, pp. 3-21.
55. ಮನೋರಮಾ ತ್ರಿಪಾಠಿ, ಪೂರ್ವೋಕ್ತ ಪಿ.ಎಚ್.ಡಿ. ಮಹಾಪ್ರಬಂಧ.
56. Tandra Patnaik, ಪೂರ್ವೋಕ್ತ, pp. 207–215.
57. "ಶೂದ್ರಬರ್ಣರೇ ಸೇವಾ ಪ್ರಾಪತ ಹುಏ / ಅಹಂಕಾರ ನಾಹಿ ಶೂದ್ರರ ದೇಹೇ", *ಬರ್ಣಟೀಕಾ*.
58. "ಭಕ್ತ ಜನಂಕರ ಸೇ ಹರಿ ಬಿಪ್ರ ಚಂಡಾಳ ಸೇ ಆದಿ ಕರಿ / ಕರುಣಾಮಯ ಜಗನ್ನಾಥ ಕಾಹಾರ ನುಹಂತಿ ಏಕತ", *ಪ್ರಣವಗೀತ*, Tandra Patnaik, ಪೂರ್ವೋಕ್ತ, pp. 212, ಟಿಪ್ಪಣಿ 12 ರಲ್ಲಿ ಉಲ್ಲೇಖವಾಗಿದೆ.
59. "ನಾಹಿ ಮೋರ ಬಿಪ್ರಬರ್ಣ ಆಶಾ / ಕ್ಷತ್ರಿಯ ಬೈಶ್ಯರೇ ನಾಹಿ ಭರಸಾ / ಸಾನ ಹೇಲೇ ಮನ ಸರುಅ ಹುಅಇ / ತೇಣು ಅಚ್ಯುತ ಜೇ ಶೂದ್ರ ಬರ್ಣಹಿ", *ಬರ್ಣಟೀಕಾ*.

# ಪುರಿ ಜಗನ್ನಾಥ ದೇವಾಲಯದ ಇತಿಹಾಸ

▫ ಮನು ವಿ. ದೇವದೇವನ್
ಸಹಾಯಕ ಪ್ರಾಧ್ಯಾಪಕರು,
ಮಾನವಿಕ ಮತ್ತು
ಸಮಾಜ ವಿಜ್ಞಾನ ವಿಭಾಗ,
ಐ.ಐ.ಟಿ. ಮಂಡಿ,
ಹಿಮಾಚಲ ಪ್ರದೇಶ
ಪಿನ್–175001
discoverie@gmail.com

(ಭಾಗ–4)

ಹದಿನಾರನೆಯ ಶತಮಾನದ ಪೂರ್ವಾರ್ಧ ಮುಗಿಯುವ ವೇಳೆಗೆ ಪಂಚಸಖಾರ ಕಾಲ ಕೊನೆಗೊಂಡಿತ್ತು. ಆ ಹೊತ್ತಿಗಾಗಲೇ ಸೂರ್ಯವಂಶಿ ಗಜಪತಿಗಳ ರಾಜ್ಯವೂ ಅಸ್ತಂಗತವಾಗಿ ಹೋಗಿತ್ತು. ಮುಂದಿನ ಕೆಲವು ದಶಕಗಳು ಒಡಿಶ್ಶಾದ ರಾಜಕೀಯ ಚರಿತ್ರೆಯಲ್ಲಿ ಅತ್ಯಂತ ಗೊಂದಲಮಯವಾಗಿತ್ತು. ಇದರ ಕರಾಳ ನೆರಳು ಜಗನ್ನಾಥ ದೇವಾಲಯದ ಮೇಲೆಯೂ ಬಿದ್ದಿತು. ಪರಿಣಾಮ, ದೇವಾಲಯದ ವ್ಯವಹಾರಗಳ ಸಂರಚನೆಯಲ್ಲಿ ಅಪಾರವಾದ ಮಾರ್ಪಾಟುಗಳು ಸಂಭವಿಸಿದವು.

ರಾಜಕಾರಣದ ಸ್ವರೂಪವು ದಕ್ಷಿಣ ಏಷ್ಯಾದಾದ್ಯಂತ ಪಲ್ಲಟಗೊಳ್ಳತೊಡಗಿದ ಕಾಲವಿದು.[1] ಉತ್ತರ ಭಾರತದಲ್ಲಿ ಮುಘಲ್ ಆಳ್ವಿಕೆ ಪ್ರಾರಂಭವಾಯ್ತು. ರಾಜ್‌ಪೂತ್ ಮನೆತನಗಳು ಹೆಚ್ಚಿನ ಚಲನಶೀಲತೆ ಪಡೆದುಕೊಳ್ಳ ತೊಡಗಿದವು. ದಕ್ಷಿಣದಲ್ಲಿ ವಿಜಯನಗರ ರಾಜ್ಯವು ಸೋಲನ್ನನುಭವಿಸಿ ಬದಿಗೆಸೆಯಲ್ಪಟ್ಟಿತು. ಆದಿಲ್ ಶಾಹಿ, ಕ಼ುತ್ಬ್ ಶಾಹಿ ಪ್ರಭುತ್ವಗಳು ಪ್ರಬಲಗೊಳ್ಳತೊಡಗಿದವು.[2] ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರ ಪ್ರಭಾವ ಏರತೊಡಗಿತು.[3] ಅದೇ ವೇಳೆಗೆ ಬೇಡ–ಕುರುಬ ಮೂಲದ ಸಣ್ಣಪುಟ್ಟ ನಾಯಕ ಮನೆತನಗಳು ದಕ್ಷಿಣ ಭಾರತದ ವಿವಿಧೆಡೆಗಳಲ್ಲಿ ತಮ್ಮ ಹಿಡಿತ ಸಾಧಿಸಿಕೊಳ್ಳತೊಡಗಿದರು.[4] ಆರ್ಥಿಕ ಸಂರಚನೆ ಯಲ್ಲಿಯೂ ಪರಿವರ್ತನೆಗಳು ಕಂಡುಬರತೊಡಗಿದವು. ಅಮೇರಿಕನ್ ಭೂಖಂಡದಿಂದ ಸರಬರಾಜುಗೊಳ್ಳತೊಡಗಿದ ಬೆಳ್ಳಿ ಹಾಗೂ ಮಧ್ಯಪ್ರಾಚ್ಯ – ಪಶ್ಚಿಮ ಏಷ್ಯಾಗಳಿಂದ ಆಮದುಗೊಂಡ ಬಂಗಾರದಿಂದಾಗಿ ನಾಣ್ಯದ

ಚಲಾವಣೆಯಲ್ಲಿ ಅಭೂತಪೂರ್ವ ವೃದ್ಧಿ ಉಂಟಾಯಿತು.[5] ಭೂವಹಿವಾಟುಗಳಲ್ಲಿ ನಾಣ್ಯರೂಪದ ಹಣಕ್ಕೆ ಹಿಂದೆಂದೂ ಇದ್ದಿರದ ಮಹತ್ವ ಒದಗಿ ಬಂದಿತು. ಭೂಹಿಡುವಳಿಯ ಸ್ವರೂಪದಲ್ಲಿ ಮಾರ್ಪಾಟುಗಳುಂಟಾಗಲು ಇದು ಕಾರಣವಾಯ್ತು. ಕೋಟೆಗಳ ಹಾಗೂ ಪೇಟೆಗಳ ಸಂಖ್ಯೆಯಲ್ಲಿಯೂ ಹೆಚ್ಚಳ ಕಂಡುಬಂದಿತು. ವ್ಯಾಪಾರ ವ್ಯವಸ್ಥೆಯಲ್ಲಿ ಪ್ರಭುತ್ವವು ಪರಿಣಾಮಕಾರಿ ಪಾತ್ರ ವಹಿಸಿತಷ್ಟೇ ಅಲ್ಲದೆ ರಾಜಮನೆತನಗಳು ಅದರಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲೂ ಮುಂದಾದವು.[6] ಹಿಂದೆ ನೆಲೆಗೊಂಡಿದ್ದಂತ ಮಣಿಗ್ರಾಮಂ, ವಳಂಜಿಯರ್, ಐಯ್ಯಾವೊಳೆ 500, ನಾನಾದೇಶಿ ಮೊದಲಾದ ವ್ಯಾಪಾರಿ ಸಂಘಗಳು ತಿರೋಭವಿಸಿ ಅ ಸ್ಥಾನವನ್ನು ಒಂಟಿ ವ್ಯಾಪಾರಿಗಳು ತುಂಬತೊಡಗಿದರು. ಸೂರ್ಯವಂಶಿಗಳ ನಂತರದ ಒಡಿಶ್ಶಾ ರಾಜಕಾರಣ ಅನಾವರಣಗೊಳ್ಳತೊಡಗಿದ್ದು ಈ ಚಾರಿತ್ರಿಕ ಸನ್ನಿವೇಶದಲ್ಲಿ.

ಸೂರ್ಯವಂಶದ ಗಜಪತಿ ಪ್ರತಾಪರುದ್ರನು 1540ರಲ್ಲಿ ನಿಧನ ಹೊಂದಿದನು. ಬಳಿಕ ಕೆಲಕಾಲ ಅವನ ಇಬ್ಬರು ಮಕ್ಕಳು ಒಬ್ಬನ ನಂತರ ಒಬ್ಬನಾಗಿ ರಾಜ್ಯಭಾರ ನಡೆಸಿದರೂ ಅವರ ಆಳ್ವಿಕೆ ಮುಂದುವರೆಯಲಿಲ್ಲ. 1541ರಲ್ಲಿ ಸೂರ್ಯವಂಶ ಅಸ್ತಂಗತವಾಯಿತು. ಇದಕ್ಕೆ ಕಾರಣವಾದ ರಾಜಕೀಯ ವಿದ್ಯಮಾನಗಳು ಸಂಕೀರ್ಣವಾಗಿದ್ದವು.

ಕಪಿಲೇಂದ್ರನು ಸ್ಥಾಪಿಸಿದ ಸೂರ್ಯವಂಶಿ ರಾಜ್ಯದ ವಿಸ್ತಾರವೂ ಪ್ರಭಾವವೂ ಅವನ ಹಾಗೂ ಪುರುಷೋತ್ತಮನ ಕಾಲದಲ್ಲಿ ಗಂಗರದನ್ನು ಮೀರಿಸುವಂತೆ ಬೆಳೆದಿತ್ತು. ಬಂಗಾಳದ ಸುಲ್ತಾನ್ ನಸೀರುದ್ದೀನ್ ಅಬುಲ್ ಮುಝಫ್ಫರ್ ಮೆಹಮೂದ್ ಶಾಹ್‌ನನ್ನು ಪರಾಭವಗೊಳಿಸಿದ ಕಪಿಲೇಂದ್ರನು ದಕ್ಷಿಣದಲ್ಲಿ ರಾಜಮಂಡ್ರಿ, ಕೊಂಡವೀಡು, ಉದಯಗಿರಿ, ವಿನುಕೊಂಡಾ ಮೊದಲಾದ ಕೋಟೆಗಳನ್ನು ತನ್ನದಾಗಿಸಿಕೊಂಡಿದ್ದ. ಮೆಹಮೂದ್ ಗವಾನ್‌ನ ಕಾಲದಲ್ಲಿ ಬೀದರ್ ನಗರವನ್ನು ಮುತ್ತಿಗೆ ಹಾಕಿ ಬಹಮನಿಗಳನ್ನು ಸೋಲಿಸಿದ್ದ. ಈ ಬಹುತೇಕ ಪ್ರದೇಶಗಳೂ ಕಪಿಲೇಂದ್ರನ ಕೊನೆಯ ದಿನಗಳಲ್ಲಿ ಅವನ ಕೈತಪ್ಪಿ ಹೋಗಿದ್ದರೂ ಪುರುಷೋತ್ತಮನು ಅವುಗಳನ್ನು ಪುನಃ ಗಜಪತಿ ರಾಜ್ಯದ ನಿಯಂತ್ರಣಕ್ಕೆ ತಂದುಕೊಳ್ಳುವಲ್ಲಿ ಯಶಸ್ವಿಯಾಗಿದ್ದ.[7]

ಪ್ರತಾಪರುದ್ರನ ಕಾಲದಲ್ಲಿ ಪರಿಸ್ಥಿತಿ ಬದಲಾಗ ತೊಡಗಿತು. 1493ರಲ್ಲಿ ಬಂಗಾಳದಲ್ಲಿ ಹುಸೇನ್ ಶಾಹ್ ಸ್ಥಾಪಿಸಿದ ಅಫ್‌ಘಾನಿ ಆಳ್ವಿಕೆ ಸೂರ್ಯವಂಶಿಗಳಿಗೆ ಬೆದರಿಕೆ ಒಡ್ಡುವ ಸಾಮರ್ಥ್ಯ ಹೊಂದಿತ್ತು. 1510ರಲ್ಲಿ ಪ್ರತಾಪರುದ್ರನು ಆಂಧ್ರದಲ್ಲಿ ವ್ಯವಹರಿಸುತ್ತಿದ್ದಾಗ ಹುಸೇನ್ ಶಾಹ್ ಒಡಿಶ್ಶಾದ ಮೇಲೆ ಹಲ್ಲೆ ನಡೆಸಿ ಕಪ್ಪ ವಸೂಲಿ ಮಾಡಿದನೆಂದು ತಬಾಕತ್ ಎ ಅಕ್‌ಬರಿ ಹೇಳುತ್ತದೆ. ಸುದ್ದಿ ಮುಟ್ಟಿದ ಕೂಡಲೆ ಒಡಿಶ್ಶಾಗೆ ಮರಳಿದ ಪ್ರತಾಪರುದ್ರನು ಹುಸೇನ್ ಶಾಹ್‌ನ ಮೇಲೆ ಹಲ್ಲೆ ನಡೆಸಿ ಅವನು ಮಂದಾರನ್‌ನ ಕೋಟೆಯಲ್ಲಿ ಅವಿತುಕೊಳ್ಳುವಂತೆ ಮಾಡಿದ. ಹುಸೇನ್ ಶಾಹ್‌ನೊಂದಿಗಿನ ಸಂಘರ್ಷದ ವಿಚಾರವು ಮಾದಳಾಪಾಂಜಿಯಲ್ಲಿ ಉಲ್ಲೇಖ ಪಡೆದಿದೆ. ಪ್ರತಾಪರುದ್ರನ ವೇಲಿಚೇರ್ಲಾ ಇಡುಪುಲಪಾಡು ಶಾಸನಗಳಲ್ಲಿಯೂ ಇದರ ಜ್ವಲಂತ ಚಿತ್ರಣವಿದೆ.[8]

ಪ್ರತಾಪರುದ್ರನಿಗೆ ಹುಸೇನ್ ಶಾಹ್‌ಗಿಂತ ದೊಡ್ಡ ಸವಾಲಾದವನು 1509ರಲ್ಲಿ ಹಂಪಿಯಲ್ಲಿ ಪಟ್ಟವೇರಿದ ತುಳುವವಂಶದ ಕೃಷ್ಣರಾಯ (ಆಳ್ವಿಕೆ 1509–1529). ರಾಯನು

1512ರಲ್ಲಿ ಉದಯಗಿರಿಯ ಮೇಲೆ ಹಲ್ಲೆ ನಡೆಸಿದನು. ಉದಯಗಿರಿ ಕೋಟೆಯು ಆಗ ಸುಭದ್ರವಾಗಿತ್ತು. ಅನೇಕ ಕಾಲದ ಬಳಕೆಗೆ ಬೇಕಾಗುವಷ್ಟು ಆಹಾರಧಾನ್ಯಗಳನ್ನೂ ಇತರ ಸರಂಜಾಮುಗಳನ್ನೂ ಅಲ್ಲಿ ಶೇಖರಿಸಲಾಗಿತ್ತೆಂದು ತೋರುತ್ತದೆ. ಹೀಗಾಗಿ ಕೋಟೆಯನ್ನು ವಶಪಡಿಸಿಕೊಳ್ಳಲು ಕೃಷ್ಣರಾಯನಿಗೆ ಒಂದು ವರ್ಷವೇ ಬೇಕಾಯಿತು. ಪ್ರಸ್ತುತ ತನ್ನಲ್ಲಿರುವ ಸಂಪನ್ಮೂಲಗಳಿಂದ ಪ್ರತಾಪರುದ್ರನನ್ನು ಗೆಲ್ಲುವುದು ಅಸಾಧ್ಯವೆಂದು ಮನಗಂಡಿರಬಹುದಾದ ಕೃಷ್ಣರಾಯನು ತಿರುಪತಿಗೆ ತೆರಳಿ, ಅಲ್ಲಿ ದರ್ಶನ ಪಡೆದು, ಹೆಚ್ಚಿನ ಸಿದ್ಧತೆಗಳಿಗೆಂದು ಕೆಲಕಾಲ ಸೈನಿಕ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದಂತೆ ತೋರುತ್ತದೆ. ಏಕೆಂದರೆ ಸಾಳುವ ತಿಮ್ಮನ ಮುಂದಾಳತ್ವದಲ್ಲಿ ವಿಜಯನಗರ ಸೈನ್ಯವು ಕೊಂಡವೀಡು ಕೋಟೆಯನ್ನು ಮುತ್ತಿ ವಶಪಡಿಸಿಕೊಂಡದ್ದು ಸುಮಾರು ಎರಡು ವರ್ಷಗಳ ನಂತರ ಮಾತ್ರ, ಅಂದರೆ 1515ರಲ್ಲಿ ಕೊಂಡವೀಡನ್ನು ಗೆಲ್ಲುವುದಕ್ಕೆಯೂ ಬಹುಕಾಲ ಯತ್ನಿಸಬೇಕಾಯಿತು. ಅದೇ ಸಂದರ್ಭದಲ್ಲಿ ವಿಜಯನಗರ ಸೈನ್ಯವು ಅಡ್ಡಂಕಿ, ವಿನುಕೊಂಡಾ, ಬೆಲ್ಲಮ ಕೊಂಡಾ, ನಾಗಾರ್ಜುನ ಕೊಂಡಾ, ಕೇತವರಂ ವಗೇರೆ ಹಲವು ಸಣ್ಣಪುಟ್ಟ ಕೋಟೆಗಳನ್ನು ವಶಪಡಿಸಿಕೊಂಡಿತು. ಬಳಿಕ ರಾಯನ ಪಡೆಯು ಕೃಷ್ಣಾನದಿಯ ಉತ್ತರದಂಡೆಯ ಕೊಂಡಪಲ್ಲಿ ಕೋಟೆಯನ್ನು ಗೆದ್ದಿತು. ಅಲ್ಲಿಂದಾಚೆಗೆ ಸಿಂಹಾಚಲಂನ ಕೋಟೆಯನ್ನು ಗೆದ್ದು ಅಲ್ಲಿ ರಾಯನು ವಿಜಯಸ್ತಂಭ ನಿಲ್ಲಿಸಿದನೆಂದು ಮನುಚರಿತ್ರ ಹೇಳುತ್ತದೆ.[9] ಮುಂದೆ ರಾಯನ ಸೈನ್ಯವು ಪೊತನೂರುವರೆಗೆ ಮುಂದುವರಿಯಿತು. ಅಲ್ಲಿಯೂ ರಾಯ ವಿಜಯಸ್ತಂಭ ನಿಲ್ಲಿಸಿದ ವಿಚಾರ ಮನುಚರಿತ್ರದಲ್ಲಿದೆ.[10] ಅಲ್ಲಿಂದ ಕಟಕ್ ನಗರ ಪ್ರವೇಶಿಸಿ ನಗರವನ್ನು ಸುಟ್ಟು ಭಸ್ಮವಾಗಿಸಿ ಪ್ರತಾಪರುದ್ರನನ್ನು ಶರಣಾಗತನಾಗಲು ರಾಯನು ನಿರ್ಬಂಧಿಸಿದನೆಂದು ವಿಜಯನಗರ ಮೂಲದ ಆಕರಗಳು ಹೇಳಿಕೊಂಡಿವೆ.[11] ರಾಯನು ತನ್ನ ಆಮುಕ್ತಮಾಲ್ಯದಾದಲ್ಲಿ ಕಟಕ್ ನಗರದ ಮೇಲೆ ಹಲ್ಲೆ ನಡೆಸಿ ನಗರವನ್ನು ಸುಟ್ಟುಹಾಕಿದನೆಂದು ಹೇಳಿಕೊಂಡಿದ್ದಾನೆ.[12] ಆಮುಕ್ತಮಾಲ್ಯದಾದಲ್ಲಿರುವ ಈ ಪಾಠವನ್ನು ಯಥಾವತ್ತಾಗಿ ಪೆದ್ದನನ ಮನುಚರಿತ್ರದಲ್ಲಿಯೂ ಕಾಣುತ್ತೇವೆ.[13] ಇದು ಅತಿಶಯೋಕ್ತಿಯಲ್ಲದೆ ಮತ್ತೇನೂ ಆಗಿರಲಿಕ್ಕಿಲ್ಲ. ರಾಯನು ಬಹುಶಃ ಪ್ರತಾಪರುದ್ರನ ಕೈಯ್ಯಲ್ಲಿ ಹೀನಾಯಾನ ಸೋಲನ್ನು ಅನುಭವಿಸಿರುವ ಸಾಧ್ಯತೆಯನ್ನೂ ಅಲ್ಲಗಳೆಯಲಾಗದು. ಏಕೆಂದರೆ ದೀರ್ಘಕಾಲದ ಈ ಸಂಘರ್ಷದ ಕೊನೆಯಲ್ಲಿ ರಾಯನ ಜೋಳಿಗೆ ಬರಿದಾಗಿಯೇ ಉಳಿಯಿತೆಂದು ಹೇಳಬೇಕು. ಕಾರಣ, ಪ್ರತಾಪರುದ್ರನೊಂದಿಗೆ ನಡೆದ ಒಪ್ಪಂದದ ಪ್ರಕಾರ ಅವನ ಮಗಳು ಜಗಮೋಹಿನಿ(ತುಕ್ಕಾದೇವಿ)ಯನ್ನು ರಾಯನು ವಧುವಾಗಿ ಪಡೆದದ್ದಲ್ಲದೆ ಕೃಷ್ಣಾನದಿಯನ್ನು ಉಭಯ ರಾಜ್ಯಗಳ ಗಡಿಯೆಂದು ಒಪ್ಪಿಕೊಳ್ಳಬೇಕಾಯಿತು.[14] ವಿಶಾಖಪಟ್ಟಣಂ ಬಳಿಯ, ವಿಜಯಸ್ತಂಭ ನಾಟಿದ, ಸಿಂಹಾಚಲಂ ಕೋಟೆಯಾಗಲಿ, ಗೋದಾವರಿಯ ಎಡದಂಡೆಯ ಮೇಲಿರುವ ರಾಜಮಂಡ್ರಿಯಾಗಲಿ ಗೋದಾವರಿ-ಕೃಷ್ಣಾ ನದಿಗಳ ನಡುವಿನ ಫಲವತ್ತಾದ ಪ್ರದೇಶವಾಗಲಿ ಅವನ ಅಧೀನಕ್ಕೆ ಬರಲಿಲ್ಲ. ಕಟಕ್‌ವರೆಗಿನ ರಾಯನ ದಂಡಯಾತ್ರೆ ಎಲ್ಲ ಅರ್ಥದಲ್ಲಿಯೂ ಅವನಿಗೆ ದುಬಾರಿಯಾಗಿತ್ತು. ತನ್ನ ಸಭಾಸದರೆದುರು ಪ್ರಸ್ತುತಪಡಿಸಿದ ಆಮುಕ್ತಮಾಲ್ಯದಾದಲ್ಲಿ ರಾಯನು ಏನೇ ಹೇಳಿಕೊಂಡಿರಲಿ, ರಾಯನನ್ನು ಮೆಚ್ಚಿಸಲು ಪೆದ್ದನನು ತನ್ನ ಮನುಚರಿತ್ರದಲ್ಲಿ ಗಜಪತಿಯು

ಚೆದರಿ ಕಾಡುಸೇರಿದ ಇತ್ಯಾದಿಯಾಗಿ ಎಷ್ಟೇ ಬಡಾಯಿಗಳನ್ನು ಕೊಚ್ಚಿಕೊಂಡಿರಲಿ, ಗಜಪತಿ ಮೂಲಗಳು ಏನೆನ್ನುತ್ತವೆ ಎಂಬ ಕಾಳಜಿಯಿಲ್ಲದೆ ವಿಜಯನಗರದಲ್ಲಿ ದೊರೆತ ಏಕಪಕ್ಷೀಯ ವಿವರಗಳನ್ನು ಆಧರಿಸಿ ನ್ಯೂನಿಸ್ ತನ್ನ ಕೃತಿಯಲ್ಲಿ ಏನನ್ನೇ ವರದಿ ಮಾಡಿರಲಿ, ಅವುಗಳಿಗೆ ಅಂತ ಹುರುಳೇನೂ ಇಲ್ಲ ಎಂಬುದು ಕೃಷ್ಣಾನದಿಯನ್ನು ಎಲ್ಲೆಯೆಂದು ಗುರುತಿಸುವ ಈ ಒಪ್ಪಂದದಿಂದ ಸಾಬೀತಾಗುತ್ತದೆ. ಇನ್ನು ಪ್ರತಾಪರುದ್ರನ ಬಗ್ಗೆ ಹೇಳುವುದಾದರೆ ಸೋಲನ್ನಪ್ಪಿದ ರಾಜರು ನೀಡುವಂತ ಯಾವ ಕಪ್ಪವನ್ನೂ ಅವನು ರಾಯನಿಗೆ ನೀಡಲಿಲ್ಲ ಮಾತ್ರವಲ್ಲ, ಅಂದಿನ ಭಾರತದ ಅತಿದೊಡ್ಡ ಹಾಗೂ ಶಕ್ತಿಶಾಲಿ ರಾಜ್ಯಗಳ ಶ್ರೇಣಿಯಲ್ಲಿ ಅಗ್ರಗಣ್ಯವೆಂದು ಪರಿಗಣಿಸಲಾಗಿದ್ದ ವಿಜಯನಗರದ ಅರಸನಿಗೆ ಮಗಳನ್ನು ನೀಡಿ ವೈವಾಹಿಕ ಸಂಬಂಧ ಬೆಳೆಸಿಕೊಳ್ಳುವ ವರ್ಚಸ್ಸು ಅವನದಾಗಿತ್ತು. ಆರ್ಥಿಕ, ರಾಜಕೀಯ ಪರಿಗಣನೆಗಳ ಮೂಲಕ ಹೇಳುವುದಾದರೆ ರಾಯನಿಗಿಂತ ಉತ್ತಮ ವರನೊಬ್ಬನನ್ನು ಪತ್ತೆ ಹಚ್ಚುವುದು ಹದಿನಾರನೆಯ ಶತಮಾನದ ಆರಂಭದ ದಶಕಗಳಲ್ಲಿ ಅಸಾಧ್ಯವೇ ಆಗಿತ್ತು. ಕಥೆಯ ಸಾರಾಂಶವಿಷ್ಟೇ: ಇತಿಹಾಸಕಾರರು ಹೇಳುತ್ತ ಬಂದಿರುವುದಕ್ಕೆ ವಿಪರೀತವಾಗಿ ಪ್ರತಾಪರುದ್ರ-ಕೃಷ್ಣರಾಯರ ನಡುವಿನ ದೀರ್ಘ ಸಂಘರ್ಷದಲ್ಲಿ ಪ್ರತಾಪರುದ್ರನು ಪ್ರತಾಪರುದ್ರನಾದ ರಾಯನು ಸೋತು ಮರಳಿ ತನ್ನ ಪ್ರತಿದ್ವಂದ್ವಿಯ ಮೇಲಿನ ಸೇಡನ್ನು ಕಾವ್ಯಶಾಸನಗಳಲ್ಲಿ ಅವನನ್ನು ಹೀನಾಯಾನವಾಗಿ ಚಿತ್ರಿಸುವ ಮೂಲಕ ತೀರಿಸಿಕೊಂಡ!

ರಾಯನೊಂದಿಗಿನ ಸಂಘರ್ಷ ಕೊನೆಗೊಂಡ ಬಳಿಕ ಪ್ರತಾಪರುದ್ರನು ಖುಲಿ ಖುತ್ಬ್ ಶಾಹ್‌ನ ಹಲ್ಲೆಯನ್ನು ಎದುರಿಸಬೇಕಾಯಿತು. ಖುತ್ಬ್ ಶಾಹ್ 1512ರಲ್ಲಿ ಗೋಲ್ಕೊಂಡಾದಲ್ಲಿ ಖುತ್ಬ್ ಶಾಹಿ ರಾಜ್ಯಕ್ಕೆ ಬುನಾದಿ ಹಾಕಿದವನು. ಗಜಪತಿ ರಾಜ್ಯದ ಮೇಲೆ ನಡೆಸಿದ ಹಲ್ಲೆ ತನ್ನ ರಾಜ್ಯವಿಸ್ತರಣಾ ಕಾರ್ಯದಲ್ಲಿ ಇವನು ಕೈಗೊಂಡ ಮಹತ್ವಾಕಾಂಕ್ಷೆಯ ಹೆಜ್ಜೆಯಾಗಿತ್ತು. ಆದರೆ ಅದು ಯಶಸ್ವಿಯಾಗಲಿಲ್ಲ. ಪ್ರತಾಪರುದ್ರನ ಕೈಯ್ಯಲ್ಲಿ ತೀವ್ರ ಸೋಲನ್ನನುಭವಿಸಿ ಇವನು ಗೋಲ್ಕೊಂಡಾಗೆ ಮರಳಬೇಕಾಯಿತು. ಪ್ರತಾಪರುದ್ರನು ತನ್ನ ಈ ವಿಜಯದ ನಂತರ ಕೃಷ್ಣಾನದಿ ದಂಡೆಯಲ್ಲಿನ ಮಂಗಳಗಿರಿ ದೇವಾಲಯ ನಿರ್ಮಿಸಿದ.[15]

ಪ್ರತಾಪರುದ್ರನ ನಿಧನದ ಬಳಿಕ ಬಹುಬೇಗ ಒಡಿಶ್ಶಾ ರಾಜಕಾರಣದಲ್ಲಿ ಅನೇಕ ಪಲ್ಲಟಗಳು ಸಂಭವಿಸಿದವು. ಹಿಂದೆ ಪ್ರತಾಪರುದ್ರನ ಸೈನ್ಯದಲ್ಲಿದ್ದು ಬಳಿಕ ಬಂಗಾಳದ ಹುಸೇನ್ ಶಾಹ್‌ನೊಂದಿಗೆ ಕೈ ಜೋಡಿಸಿದ ಗೋವಿಂದ ವಿದ್ಯಾಧರನ ಪ್ರಭಾವ ಒಡಿಶಾ ರಾಜಕಾರಣದಲ್ಲಿ ಏರತೊಡಗಿತು. ಪ್ರತಾಪರುದ್ರನ ಬಳಿಕ ಪಟ್ಟವೇರಿದ ಅವನ ಮಕ್ಕಳು ಕಾಲುವ, ಕಖರು, ಇಬ್ಬರನ್ನೂ ಕೊಲ್ಲಿಸಿದ ಇವನು 1542ರ ವೇಳೆಗೆ ತನ್ನ ಅಧಿಕಾರ ಸ್ಥಾಪಿಸಿದ್ದ. 1549ರಲ್ಲಿ ಇವನು ಮೃತಪಟ್ಟ. ಬಳಿಕ, 1557ರ ವರೆಗೆ, ಗೋವಿಂದ ವಿದ್ಯಾಧರನ ಮಗ ಚಕ್ರಪ್ರತಾಪನ ಆಳ್ವಿಕೆ ನಡೆಯಿತು. ಇವನ ಆಳ್ವಿಕೆಯ ಅಡಿಯಲ್ಲಿ ಮುಕುಂದ ದನಯ್ ವಿದ್ಯಾಧರ ಎಂಬ ಇಬ್ಬರು ಸೇನಾಪತಿಗಳು ಶಕ್ತಿಕೇಂದ್ರಗಳಾಗಿ ಹೊಮ್ಮ ಬರತೊಡಗಿದರು. 1557ರಲ್ಲಿ ಚಕ್ರಪ್ರತಾಪನನ್ನು ಕೊಂದು ಪಟ್ಟವೇರಿದ ಅವನ ಮಗ ನರಸಿಂಹ ಜೇನಾನನ್ನು 1558ರ ವೇಳೆಗೆ ಮುಕುಂದನು ಕೊಲ್ಲಿಸಿದ್ದ. ತರುವಾಯ ಪಟ್ಟಾಭಿಷಿಕ್ತನಾದ ನರಸಿಂಹ ಜೇನಾನ ತಮ್ಮ ರಘುರಾಮ ಛೋಟಾರಾಯನನ್ನೂ 1560ರ

ಈ ಅಧ್ಯಾಯದಲ್ಲಿ ಉಲ್ಲೇಖಗೊಂಡಿರುವ ಪ್ರಮುಖ ಕೇಂದ್ರಗಳು




ವೇಳೆಗೆ ಕೊಲ್ಲಿಸುವಲ್ಲಿ ಯಶಸ್ವಿಯಾದ ಮುಕುಂದನು ರಾಜ್ಯವನ್ನು ಪೂರ್ಣವಾಗಿ ತನ್ನ ನಿಯಂತ್ರಣಕ್ಕೆ ತಂದುಕೊಂಡ. ತನ್ನ ಪ್ರತಿಸ್ಪರ್ಧಿ ದನಯ್ ವಿದ್ಯಾಧರನನ್ನು ರಘುರಾಮನ ಆಳ್ವಿಕೆಯ ಸಂದರ್ಭದಲ್ಲಿಯೇ ಬಂಧಿಸಿ ಕೊಂದು ಹಾಕಿದ್ದರಿಂದ ಮುಕುಂದನಿಗೆ ಸವಾಲೆಸಗುವವರು ಒಡಿಶ್ಶಾದಲ್ಲಿ ಯಾರೂ ಇಲ್ಲದಂತಾದರು.[16]

ಮುಕುಂದನ ಆಳ್ವಿಕೆ 1568ರವರೆಗೆ ನಡೆಯಿತು. ಈ ಮಧ್ಯೆ ಅವನು ಬಂಗಾಳದ ಸುಲ್ತಾನ್ ಸುಲೈಮಾನ್ ಕುರ್ರಾನಿಯ ದ್ವೇಶಕ್ಕೆ ಪಾತ್ರನಾಗಿಹೋದ. 1560ರಲ್ಲಿಯೇ ಜಾಜ್‌ಪುರ್‌ವರೆಗೆ ಹಲ್ಲೆ ನಡೆಸಿದ ಬಂಗಾಳದ ಗ್ಯಾಸುದ್ದೀನ್ ಜಲಾಲ್ ಶಾಹ್‌ನನ್ನು ಪರಾಭವಗೊಳಿಸಿ ಪೂರ್ವಭಾರತದ ರಾಜಕರಣದಲ್ಲಿ ಮುಕುಂದನು ತನ್ನ ವರ್ಚಸ್ಸನ್ನು ಹೆಚ್ಚಿಸಿಕೊಂಡಿದ್ದ. ಬಳಿಕ ಕರ್ರಾನಿಯ ಕೈಯಿಂದ ತಪ್ಪಿಸಿಕೊಂಡು ಒಡಿಶ್ಶಾಗೆ ಬಂದ ಇಬ್ರಾಹೀಂ ಖಾನ್ ಸೂರ್ ಎಂಬುವನಿಗೆ ಆಶ್ರಯ ನೀಡಲು ಮುಂದಾದ ಮುಕುಂದನು ಕರ್ರಾನಿಯನ್ನು ನಿಯಂತ್ರಿಸಲು ಹವಣಿಸುತ್ತಿದ್ದ ಮುಘಲ್ ದೊರೆ ಅಕ್‌ಬರ್ 1565ರಲ್ಲಿ ಮುಕುಂದನೊಂದಿಗೆ ಸೈನಿಕ ಒಪ್ಪಂದ ನಡೆಸಿದ ವಿಚಾರವು ಅಕ್‌ಬರ್ ನಾಮಾದಲ್ಲಿ ಉಕ್ತವಾಗಿದೆ.[17]

ಮುಕುಂದನನ್ನು ಉನ್ಮೂಲನಗೊಳಿಸುವ ಉದ್ದೇಶದಿಂದ 1568ರಲ್ಲಿ ಸುಲೈಮಾನ್ ಕರ್ರಾನಿಯು ಕಾಲಾಪಹಾಡ್ ಎಂಬ ಸೇನಾಪತಿಯ ಮುಂದಾಳಿಕೆಯಲ್ಲಿ ದೊಡ್ಡ ಸೈನ್ಯವೊಂದನ್ನು ರವಾನೆಗೊಳಿಸಿದ. ಮುಕುಂದನ ಶಕ್ತಿಯು ಆ ವೇಳೆಗಾಗಲೇ ಅನೇಕ ಒಳಸಂಚುಗಳಿಂದಾಗಿ ಕ್ಷೀಣಿಸತೊಡಗಿತ್ತು. ಕಾಲಾಪಹಾಡ್‌ನ ವಿಧ್ವಂಸಕ ಹಲ್ಲೆಯಲ್ಲಿ ಮುಕುಂದ ಸಾವನ್ನಪ್ಪಿದ. ಬಳಿಕ ಪುರಿಯನ್ನು ಆಕ್ರಮಿಸಿದ ಕಾಲಾಪಹಾಡ್‌ನ ಸೈನ್ಯವು ಜಗನ್ನಾಥ ದೇವಾಲಯವನ್ನು ದೋಚತೊಡಗಿತು. ಮಾದಳಾಪಾಂಜಿಯ ಪ್ರಕಾರ ದೇವಾಲಯದಿಂದ 52 ಕೋಟಿ ರೂಪಾಯಿ ಮೌಲ್ಯದ ವಸ್ತುಗಳನ್ನು ದೋಚಲಾಯಿತು.[18] ನಿಮತ್ ಅಲ್ಲಾಹ್‌ನ ಮಖ್‌ಜ಼ಾನ್ ಎ ಅಫ್‌ಘಾನಾದ ಪ್ರಕಾರ ಏಳುನೂರು ಬಂಗಾರದ ಮೂರ್ತಿಗಳಿದ್ದ ಪುರಿ ದೇವಾಲಯವನ್ನು ಕಾಲಾಪಹಾಡ್ ಧ್ವಂಸಗೊಳಿಸಿದ.[19]

ಇದಾದ ಬಳಿಕ ಜಗನ್ನಾಥ, ಸುಭದ್ರಾ, ಬಲಭದ್ರ, ಸುದರ್ಶನರ ದಾರುಮೂರ್ತಿಗಳನ್ನು ವಶಪಡಿಸಿಕೊಂಡ ಕಾಲಾಪಹಾಡ್ ಅವುಗಳನ್ನು ಕೊಂಡೊಯ್ದು ಗಂಗಾ ತೀರದಲ್ಲಿ ಸುಟ್ಟು ಹಾಕಿದನೆಂದು ಮಾದಾಳಾಪಾಂಜಿ ಹೇಳುತ್ತದೆ.[20] ದೇವಾಲಯದ ಇತಿಹಾಸದಲ್ಲಿ ಇದೊಂದು ನಿರ್ಣಾಯಕ ಘಟನೆ. ಜಗನ್ನಾಥನ ಅರ್ಚಕವರ್ಗ ಹಾಗೂ ಇತರ ಸೇವಕ ಬಳಗಕ್ಕೆ ಇದರಿಂದ ಎಂಥ ಭೀಕರ ಆರ್ಥಿಕ ಹಾಗೂ ಧಾರ್ಮಿಕ ಹೊಡೆತ ಬಿತ್ತೆಂಬುದನ್ನು ಊಹಿಸಬಹುದಷ್ಟೇ? ಎರಡು ದಶಕಗಳ ಕಾಲ ದೇವಾಲಯವು ಬಂದಾಗಿತ್ತು. ಆರಾಧನೆ ನಿಂತುಹೋಯ್ತು. ಪೂಜೆ ಪುನಸ್ಕಾರಗಳು ಸ್ಥಗಿತಗೊಂಡವು. ಆರ್ಥಿಕ ಸಂಬಂಧಗಳ ಸಂಕೀರ್ಣ ಸಂರಚನೆಯೊಂದು ಅನಿಶ್ಚಿತತೆಯನ್ನು ಎದುರಿಸಿ ನಿಂತಿತು. ಪುರಿನಗರ ಸ್ತಬ್ಧವಾಯ್ತು. ಶ್ರೀಮಂದಿರವು ಸಾಗರದ ನೌಕೆಗಳಿಗೆ ಮಾತ್ರ ಮಾರ್ಗಸೂಚಿಯಾದ ಬಿಳಿದೇಗುಲ(white pagoda)ವಾಗಿ ಉಳಿಯಿತು. ಆದರೆ ಮಾದಾಳಾಪಾಂಜಿಯ ಪ್ರಕಾರ ಸುಟ್ಟು ಹೋದದ್ದು ಕೇವಲ ಮರದ ತುಂಡುಗಳು. ಅವುಗಳನ್ನು ದೇವತೆಯಾಗಿಸಿದ ಬ್ರಹ್ಮ ಪದಾರ್ಥ ಎಂಬ ದ್ರವ್ಯವು ನಾಶವಾಗಲಿಲ್ಲ. ಬಿಸಾರ್ ಮಹಾಂತ ಎಂಬ ಜಗನ್ನಾಥನ ಭಕ್ತನಿಗೆ ಈ ಬ್ರಹ್ಮ ಪದಾರ್ಥವು ದೊರಕಿತು. ಕುಜಾಂಗ ಎಂಬ ಊರಿನ ನಿವಾಸಿಯಾದ ಬಿಸಾರ್ ಮಹಾಂತಿ ಅದನ್ನು ತನ್ನ ಹತ್ತಿರವೇ ಜೋಪಾನವಾಗಿ ಇಟ್ಟುಕೊಂಡನು.[21]

ಈ ಸಂದರ್ಭದಲ್ಲಿ ರಾಮಚಂದ್ರ ಎಂಬಾತನ ಪ್ರವೇಶದಿಂದಾಗಿ ಕಥೆ ಹೊಸ ತಿರುವು ಪಡೆದುಕೊಳ್ಳುತ್ತದೆ. ಈತ ಮತ್ತಾರೂ ಅಲ್ಲ, ಮುಕುಂದನು ಈ ಹಿಂದೆ ಕೊಲ್ಲಿಸಿದ್ದ ದನಯ್ ವಿದ್ಯಾಧರನ ಮಗ. ಭೋಯಿ ವಂಶದ ಇವನು ಮುಕುಂದನ ನಿಧನದ ವರೆಗೆ ರಾಜಮಂಡ್ರಿಯ ಕಾರಾಗೃಹದಲ್ಲಿದ್ದ. 1568ರಲ್ಲಿ, ಕಾಲಾಪಹಾಡ್‌ನ ಹಲ್ಲೆಯ ಸಂದರ್ಭದಲ್ಲಿ ಕಾರಾಗೃಹದಿಂದ ತಪ್ಪಿಸಿಕೊಂಡು ವಿಶಾಖಪಟ್ಟಣದ ಬಳಿ ಕೋಟೆಯೊಂದರಲ್ಲಿ ಅವಿತುಕೊಂಡ ಇವನು 1571-72ರಲ್ಲಿ ಗೋಲ್ಕೊಂಡಾದ ಕುತ್ಬ್ ಶಾಹಿಗಳು ಹಲ್ಲೆ ನಡೆಸಿದಾಗ, ಪುನಃ ಪಲಾಯನಗೈದು ವಂಶಧಾರಾ, ಋಷಿಕುಲ್ಯಾ ನದಿಗಳನ್ನು ದಾಟಿ ಚಿಲಿಕಾ ಸರೋವರದ ಉತ್ತರಕ್ಕೆ ಭುಬನೇಶ್ವರದಿಂದ ಇಪ್ಪತ್ತು ಕಿ.ಮೀ. ದಕ್ಷಿಣದಲ್ಲಿರುವ ಖುರ್ಧಾದಲ್ಲಿ ನೆಲೆಸಿದ. ಆಗ ಖುರ್ಧಾ ಶಬರವಂಶಜರ ನೆಲೆಯಾಗಿತ್ತು. ಶಬರರ ದೊರೆಯನ್ನು ಕೊಂದ ರಾಮಚಂದ್ರನು ಕ್ರಮೇಣ ಆ ಪ್ರದೇಶದ ಮೇಲೆ ತನ್ನ ಹಿಡಿತ

ಸಾಧಿಸತೊಡಗಿದ. ಒಡಿಶ್ಶಾದ ಕರಾವಳಿ ಪ್ರಾಂತ್ಯದಲ್ಲಿ ಅನೇಕ ಸಣ್ಣ ಬೋಳುಗುಡ್ಡಗಳಿವೆ. ಕೆಲವೊಮ್ಮೆ ಒಂಟಿಯಾಗಿ ಹಾಗೂ ಕೆಲವೊಮ್ಮ ಶ್ರೇಣಿಯಾಗಿ ನಿಲ್ಲುವ ಈ ಗುಡ್ಡಗಳಲ್ಲಿ ಖುರ್ಧಾದ ಬಾರುಣೇಯಿಯೂ ಒಂದು. ಬಾರುಣೇಯಿಯನ್ನು ರಾಮಚಂದ್ರ ತನ್ನ ಕೇಂದ್ರವಾಗಿಸಿಕೊಂಡ.[22]

ರಾಮಚಂದ್ರನ ರಂಗಪ್ರವೇಶ ಅಕ್‌ಬರ್‌ನ ಎದೆಯಲ್ಲಿ ಸಂತಸ ಮೂಡಿಸುವ ಸಂಗತಿಯಾಗಿತ್ತು. ಇತ್ತ ಪುರಿಯ ವರೆಗಿನ ಕ್ಷೇತ್ರಗಳನ್ನು ವಶಪಡಿಸಕೊಂಡಿದ್ದ ಬಂಗಾಳದ ಅಫ್‌ಘಾನರು, ಅತ್ತ ಗೋದಾವರಿ ದಾಟಿ ದಕ್ಷಿಣ ಒಡಿಶ್ಶಾವನ್ನು ತಮ್ಮ ತೆಕ್ಕೆಗೆ ತಂದುಕೊಳ್ಳಲು ಹವಣಿಸುತ್ತಿದ್ದ ಗೋಲ್ಕೊಂಡಾದ ಕುತ್‌ಬ್ ಶಾಹಿಗಳು, ಈ ಎರಡು ಪ್ರಬಲ ಶತ್ರುಗಳ ನಡುವಲ್ಲಿ ತನ್ನದೇ ಆದ ಸ್ವಾಯತ್ತತೆಯನ್ನು ಸ್ಥಾಪಿಸಲು ಯತ್ನಿಸುತ್ತಿದ್ದ ರಾಮಚಂದ್ರನಿಗೆ ಬೆಂಬಲ ನೀಡುವುದು ತನ್ನ ಕರ್ತವ್ಯ ಎಂದು ಅಕ್‌ಬರ್ ಬಗೆದಿರಬಹುದು. ಹದಿನಾರನೆಯ ಶತಮಾನದ ಹೊಸ ಆರ್ಥಿಕ-ರಾಜಕೀಯ ಸಂರಚನೆಯ ಅಡಿಯಲ್ಲಿ ಏಳಿಗೆ ಪಡೆಯತೊಡಗಿದ ಉದಯೋನ್ಮುಖ ವರ್ಗದ ಮುಖಂಡರಲ್ಲಿ ಹಲವರು ಆಗ ಒಡಿಶ್ಶಾದ ವಿವಿಧ ಭಾಗಗಳಲ್ಲಿ ಕೋಟೆಗಳನ್ನು ಕಟ್ಟಿ ಶಕ್ತಿಕೇಂದ್ರಗಳನ್ನು ಸ್ಥಾಪಿಸಲು ಹವಣಿಸುತ್ತಿದ್ದರು. ಕೋಟೆ ಮೂಲದ ಈ ಹೊಸ ದೊರೆಗಳಿಗೆ ಗಡಜಾತ ಎಂದು ಹೆಸರು. ರಾಮಚಂದ್ರನು ಖುರ್ಧಾದಲ್ಲಿ ನೆಲೆಸಿದ ಕೂಡಲೆ ಅನೇಕ ಗಡಜಾತ ದೊರೆಗಳೊಂದಿಗೆ ಸಂಪರ್ಕ, ಸಂಬಂಧ ಬೆಳೆಸಿಕೊಳ್ಳತೊಡಗಿದನು. ಇದು ಅವನ ಸೈನಿಕ ಶಕ್ತಿಯಲ್ಲಿ ವೃದ್ಧಿಯುಂಟಾಗಲು ಕಾರಣವಾಯಿತು. ಅಫ್‌ಘಾನ್ ಹಾಗೂ ಗೋಲ್ಕೊಂಡಾ ಸುಲ್ತಾನರನ್ನು ಹತ್ತಿಕ್ಕುವ ಕಾರ್ಯದಲ್ಲಿ ಈ ಗಡಜಾತರ ನೆರವು ಅತ್ಯಗತ್ಯ ಎಂಬುದನ್ನು ಅಕ್‌ಬರ್ ಮನಗಂಡಿದ್ದಂತೆ ತೋರುತ್ತದೆ. ಹೀಗಾಗಿ ಅವನು ರಾಮಚಂದ್ರನೊಂದಿಗೆ ಮೈತ್ರಿ ಬೆಳೆಸಿಕೊಳ್ಳಲು ನಿರ್ಧರಿಸಿದನು.

ಬಂಗಾಳದ ಅಫ್‌ಘಾನ್ ಅರಸರು ಬಲಶಾಲಿಗಳಾಗಿದ್ದರು. ಮುಘಲರ ಕೈಯಲ್ಲಿ ಹಲವು ಬಾರಿ ಸೋಲನ್ನನುಭವಿಸಿ 1574ರಲ್ಲಿ ಸ್ಥಾಪಿತವಾದ ಮುಘಲ್ ಸುಬಾದೊಂದಿಗೆ ಪೈಪೋಟಿಗಿಳಿಯಬೇಕಾಯ್ತಾದರೂ ಅವರ ನಿಯಂತ್ರಣ ಸಡಿಲಗೊಳ್ಳಲಿಲ್ಲ. ಹೀಗಾಗಿ ಅವರ ಆಳ್ವಿಕೆಯನ್ನು ಕೊನೆಗೊಳಿಸಲು ಅಕ್‌ಬರ್ ತನ್ನ ದಂಡಾಧಿಪತಿಗಳಲ್ಲಿ ಅಗ್ರಗಣ್ಯನಾದ ರಾಜಾ ಮಾನ್ ಸಿಂಗ್‌ನನ್ನೇ ಕಳಿಸುವಂತಾದನು. 1590ರಲ್ಲಿ ನಡೆದ ಯುದ್ಧದಲ್ಲಿ ಅಫ್‌ಘಾನರು ತೀವ್ರ ಸೋಲನ್ನಪ್ಪಿದರು. ಎರಡು ವರ್ಷಗಳ ಬಳಿಕ, 1592ರಲ್ಲಿ ಅಫ್‌ಘಾನರು ಮತ್ತೆ ಕ್ರಿಯಾಶೀಲರಾಗತೊಡಗಿದ್ದನ್ನು ಕಂಡು ಮಾನ್ ಸಿಂಗ್ ಪುನಃ ಆಕ್ರಮಣ ನಡೆಸುವ ನಿರ್ಧಾರಕ್ಕೆ ಬಂದ. ಎರಡೂ ಸೈನ್ಯಗಳ ಮುಖಾಮುಖಿಯಾಯಿತು. ಯುದ್ಧ ನಡೆಯಿತು. ವಿಧ್ವಂಸಕ ಯುದ್ಧ. ರಾಮಚಂದ್ರ ಮತ್ತು ಸಯೀದ್ ಖಾನ್ ಎಂಬ ಬಂಗಾಳದ ಸುಬಹ್‌ದಾರ್ (ಆಳ್ವಿಕೆ 1587–94) ಇಬ್ಬರೂ ಕಟಕ್ ನಗರವನ್ನು ವಶಪಡಿಸಿಕೊಳ್ಳುವವರೆಗೆ ಮಾನ್ ಸಿಂಗ್‌ನೊಂದಿಗೆ ದೃಢವಾಗಿ ನಿಂತರು. ಕೊನೆಗೆ ಅಫ್‌ಘಾನರು ಸೋಲನ್ನಪ್ಪಿದರು. ಪರಿಣಾಮ, ಈವರೆಗೆ ಅಫ್‌ಘಾನರ ಆಳ್ವಿಕೆಯಲ್ಲಿದ್ದ ಒಡಿಶ್ಶಾದ ಪ್ರದೇಶಗಳೆಲ್ಲವೂ ಮಾನ್ ಸಿಂಗ್‌ನ ಕೈವಶವಾಯಿತು. ಮಾನ್ ಸಿಂಗ್ ಕೂಡಲೆ ಈ ಪ್ರದೇಶಗಳನ್ನು ಮುಘಲ್ ಬಂದಿ (ಮುಘಲ್ ಅರಸುಗಳು ಹಿಡುವಳಿ) ಎಂದು ಘೋಷಿಸಿದನು. ಹೀಗೆ, ಜಗನ್ನಾಥ ದೇವಾಲಯವನ್ನೊಳಗೊಂಡ ಪುರಿಯು ಮುಘಲ್ ಬಂದಿಯಲ್ಲಿ ಸೇರಿತು.[23]

ಆದರೆ, ಆ ವೇಳೆಗಾಗಲೇ ಘಟನಾವಳಿಗಳ ಮತ್ತೊಂದು ಸರಮಾಲೆ ಬಿಚ್ಚಿಕೊಂಡಿತ್ತು. ತನ್ನ ಆಳ್ವಿಕೆಯನ್ನು ಭದ್ರಗೊಳಿಸುವ ನಿಟ್ಟಿನಲ್ಲಿ ರಾಮಚಂದ್ರನು ಮಹತ್ವದ ಹೆಜ್ಜೆಯೊಂದನ್ನು ಇಡತೊಡಗಿದನು. ಸೂರ್ಯವಂಶಿಗಳ ಪ್ರಭುತ್ವಾಚರಣೆಯಲ್ಲಿ ಜಗನ್ನಾಥ ವಹಿಸಿದ ಪಾತ್ರದ ಅರಿವು ಅವನಿಗೆ ಇದ್ದಿರಲೇ ಬೇಕು. ಪ್ರತಾಪರುದ್ರನು ಚೈತನ್ಯ ಹಾಗೂ ಪಂಚಸಖಾರಿಗೆ ಪೋಷಣೆ ನೀಡಿದ್ದನು. ಜಗನ್ನಾಥ ದೇವಾಲಯವನ್ನು ವಿಸ್ತರಿಸಿ ಅದಕ್ಕೊಂದು ನಾಟ್ಯಮಂಟಪ ಕಟ್ಟಿಸಿದ್ದನು. ಅವನ ತಂದೆ ಪುರುಷೋತ್ತಮನ ಕಾಂಚಿಕಾಬೇರಿ ವೃತ್ತಾಂತವೂ ರಾಮಚಂದ್ರನ ಕಾಲಕ್ಕಾಗಲೇ ಖ್ಯಾತಿ ಪಡೆದಿರುವ ಸಾಧ್ಯತೆಯಿದೆ. ಹೀಗಾಗಿ ತನ್ನ ರಾಜಕಾರಣದಲ್ಲಿ ಜಗನ್ನಾಥನನ್ನು ಪಾಲ್ಗೊಳ್ಳಿಸುವ ಉಪಾಯ ರಾಮಚಂದ್ರನಿಗೆ ಹೊಳೆದಿದ್ದರೆ ಅದರಲ್ಲಿ ಆಶ್ಚರ್ಯವಿಲ್ಲ. ಆದರೆ ಈಗ ಜಗನ್ನಾಥ ಉಳಿದಿರಲಿಲ್ಲ. ಅವನ ವಿಗ್ರಹವನ್ನು ಕಾಲಾಪಹಾಡ್ ಸುಟ್ಟು ಬೂದಿಯಾಗಿಸಿದ್ದ. ಆದ್ದರಿಂದ ರಾಮಚಂದ್ರನು ಹೊಸ ಮೂರ್ತಿಗಳನ್ನು ಕೆತ್ತಿಸಲು ನಿರ್ಧರಿಸಿದ. ಅಂತೆಯೇ 1587ರಲ್ಲಿ ವಿಗ್ರಹಗಳು ಸಜ್ಜಾದವು. ಸಂತುಷ್ಟನಾದ ಜಗನ್ನಾಥನು ರಾಮಚಂದ್ರನ ಕನಸಲ್ಲಿ ಬಂದು ಕುಜಾಂಗದ ಬಿಸಾರ್ ಮಹಾಂತಿ ಎಂಬಾತನ ಬಳಿ ತನ್ನ ಬ್ರಹ್ಮ ಪದಾರ್ಥವಿದೆ ಎಂಬ ಸಂಗತಿಯನ್ನು ತಿಳಿಸಿದನಂತೆ. ಬ್ರಹ್ಮ ಪದಾರ್ಥವನ್ನು ತರಿಸಲಾಯಿತು. ಅದನ್ನು ವಿಗ್ರಹದೊಳಗಿಟ್ಟು ಖುರ್ಧಾದಲ್ಲಿಯೇ ಪ್ರತಿಷ್ಠಾಪನೆ ನಡೆಸಿ ಎರಡು ವರ್ಷಗಳ ಕಾಲ ರಾಮಚಂದ್ರನು ಜಗದೊಡೆಯನನ್ನು ಆರಾಧಿಸಿದನು. ಈ ಮಧ್ಯೆ ಅನೇಕ ಗಡಜಾತ ದೊರೆಗಳಿಗೆ ಸಾಮಂತಸ್ಥಾನ ನೀಡಿ ಜಗನ್ನಾಥನ ಸೇವೆ ಕೈಗೊಳ್ಳಲು ಅವರಿಗೆ ಅನುಮತಿ ನೀಡಿದನು. ಬಳಿಕ, 1589ರಲ್ಲಿ, ವಿಗ್ರಹಗಳನ್ನು ಪುರಿಗೆ ಕೊಂಡೊಯ್ದು ಶ್ರೀಮಂದಿರದಲ್ಲಿ ರತ್ನಸಿಂಹಾಸನದ ಮೇಲೆ ಪ್ರತಿಷ್ಠಾಪಿಸಲಾಯಿತು. ಎರಡು ವರ್ಷ ತನ್ನ ಅರಮನೆಯ ಆವರಣದಲ್ಲೇ ಇಟ್ಟು ಪೂಜಿಸಿದ್ದು ರಾಮಚಂದ್ರನಿಗೆ ಜಗನ್ನಾಥ ಪರಂಪರೆಯೊಂದಿಗೆ ಸೂರ್ಯವಂಶಿಗಳಿಗೆ ಇದ್ದಿರದಂತ ವಿಶಿಷ್ಟ ಸಂಬಂಧವೊಂದನ್ನು ಬೆಸೆದುಕೊಳ್ಳಲು ನೆರವಾಯಿತು. ಕಾಲಾಪಹಾಡ್‌ನ ಹಲ್ಲೆಯೊಂದಿಗೆ ನಿಂತುಹೋದ ಜಗನ್ನಾಥನ ಆರಾಧನೆಗೆ ಮತ್ತೆ ಚಾಲನೆ ನೀಡಿದ ರಾಮಚಂದ್ರನಿಗೆ ಇದರಿಂದಾಗಿ ದ್ವಿತೀಯ ಇಂದ್ರದ್ಯುಮ್ನ ಎಂಬ ಬಿರುದು ಒದಗಿಬಂತು. ಇಂದ್ರದ್ಯುಮ್ನನಿಂದ ಸ್ಥಾಪಿಸಲಾದ್ದೆಂದು ನಂಬಲಾಗಿರುವ ಜಗನ್ನಾಥ ಪರಂಪರೆಗೆ ಮರುಜೀವ ತುಂಬಿದವನು ರಾಮಚಂದ್ರ ಎಂಬ ದ್ವಿತೀಯ ಇಂದ್ರದ್ಯುಮ್ನ.[24]

ಸುಮಾರು ಎರಡು ದಶಕಗಳ ಕಾಲ (1568–89ರವರೆಗೆ) ಪುರಿಯಿಂದ ನಾಪತ್ತೆಯಾಗಿದ್ದ ಜಗನ್ನಾಥನು ಪುನಃ ರತ್ನಸಿಂಹಾಸನಾರೂಢನಾದ್ದರಿಂದ ಮುಂದಿನ ರಾಜಕಾರಣದಲ್ಲಿ ಸೂರ್ಯವಂಶಿಗಳ ಕಾಲದಲ್ಲಿದ್ದಂತೆ ಅವನ ಪಾತ್ರವು ಮತ್ತೊಮ್ಮೆ ನಿರ್ಣಯಪ್ರಾಯವಾಯಿತು. 1592ರ ಅಫ್‌ಘಾನ್–ಮುಘಲ್ ಸಂಘರ್ಷದ ಸಂದರ್ಭದಲ್ಲಿಯೇ ಅದರ ಮೊದಲ ಸೂಚನೆಗಳು ಕಂಡು ಬರತೊಡಗಿದ್ದವು. ಮಾನ್ ಸಿಂಗ್‌ನ ಸೈನ್ಯವು ಕಟಕ್ ನಗರವನ್ನು ಅಫ್‌ಘಾನ್‌ರ ಕೈಯಿಂದ ವಶಪಡಿಸಿಕೊಂಡ ಕೂಡಲೇ ರಣರಂಗದಲ್ಲಿ ಕೆಲವು ಪಲ್ಲಟಗಳು ನಡೆದವು. ಮಾನ್ ಸಿಂಗ್ ಪ್ರಭಾವಶಾಲಿಯಾಗುತ್ತ ಹೋದರೆ ಅದು ಬಂಗಾಳದ ತನ್ನ ಸುಬಹ್‌ದಾರಿಗೆ ಕುತ್ತಾದೀತೆಂದು ಹೆದರಿದ ಸಯೀದ್ ಖಾನ್ ತನ್ನ ಸೈನ್ಯವನ್ನು ಹಿಂದೆಳೆದುಕೊಂಡನು. ಇಂಥದ್ದೇ ಭಯವೊಂದು

ರಾಮಚಂದ್ರನನ್ನೂ ಕಾಡಿತ್ತು. ಹೀಗಾಗಿ ಅವನೂ ಮಾನ್ ಸಿಂಗ್‌ಗೆ ನೀಡಿದ ನೆರವನ್ನು ವಾಪಸ್ಸು ತೆಗೆದುಕೊಂಡನು. ಮಾತ್ರವಲ್ಲ, ನಿನ್ನೆಯ ತನಕ ಪರಮ ಶತ್ರುಗಳಾಗಿದ್ದ ಅಫ್‌ಘಾನ್‌ರೊಂದಿಗೆ ಕೈಜೋಡಿಸಿ ಸೋಲನ್ನೆದುರಿಸುತ್ತಿದ್ದ ಅವರಿಗೆ ಅವಿತುಕೊಳ್ಳಲು ಕಟಕ್ ಸಮೀಪದ ಜಾರಂಗ ಬಳಿಯಿರುವ ಸಾರಂಗಗಡದ ಕೋಟೆಯಲ್ಲಿ ಎಡೆಮಾಡಿಕೊಟ್ಟನು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಗಡಜಾತ ದೊರೆಗಳು ರಾಮಚಂದ್ರನ ಪಕ್ಷಪಾತಿಗಳಾದ್ದರಿಂದ ಅವರೂ ಮುಘಲ್ ಸೈನ್ಯಕ್ಕೆ ನೆರವನ್ನು ಸ್ಥಗಿತಗೊಳಿಸುವ ಸಾಧ್ಯತೆಯಿತ್ತು.

ಮಾನ್ ಸಿಂಗ್ ಈಗ ರಾಮಚಂದ್ರನನ್ನು ಹತ್ತಿಕ್ಕುವ ನಿರ್ಣಯಕ್ಕೆ ಬಂದನು. ಅದಕ್ಕೆ ಪೂರ್ವಭಾವಿಯಾಗಿ ಪುರಿಗೆ ತೆರಳಿ ಜಗನ್ನಾಥನ ದರ್ಶನ ಪಡೆದನು. ಅಫ್‌ಘಾನ್‌ರನ್ನು ಪರಾಭವಗೊಳಿಸಿದ ಬಳಿಕ ಒಡಿಶ್ಶಾದಲ್ಲಿ ಮತ್ತಾರಿಗೂ ಇರದಂಥ ಅಪೂರ್ವ ಸ್ಥಾನವೊಂದು ಅವನಿಗೆ ದೊರಕಿತು. ಹಿಂದೆ ಒಡಿಶ್ಶಾದಲ್ಲಿ ಜಗನ್ನಾಥನಿದ್ದ, ಅವನಿಗೊಬ್ಬ ಗಜಪತಿಯೂ ಇದ್ದ. ಕಾಲಾಂತರದಲ್ಲಿ, ಕಾರಣಾಂತರಗಳಿಂದ, ಜಗಪತಿ ಕಣ್ಮರೆಯಾದ. ಗಜಪತಿಯೂ ಇಲ್ಲದಂತಾದ. ಈಗ ಜಗಪತಿ ಮರಳಿಬಂದಿದ್ದಾನೆ. ರತ್ನಸಿಂಹಾಸನದ ಮೇಲೆ ವಿಜೃಂಭಿಸುತ್ತಿದ್ದಾನೆ. ಈಗ ಅವನಿಗೋರ್ವ ಗಜಪತಿಯ ಅಗತ್ಯವಿದೆ, ಆದ್ಯ ಸೇವಕನಾಗಿ ಸೇವೆ ಸಲ್ಲಿಸಬಲ್ಲ ಗಜಪತಿ. ಪುರಿ ಹಾಗೂ ಒಡಿಶ್ಶಾ ಈಗ ತನ್ನ ನಿಯಂತ್ರಣದಲ್ಲಿದೆ. ಹೀಗಾಗಿ ಹೊಸ ಗಜಪತಿಯನ್ನು ನಿಯಮಿಸುವ ಹಕ್ಕು ತನಗಿದೆ. ಈ ವಿಚಾರದ ಪೂರ್ಣ ಅರಿವೂ ಅದರ ಸೂಕ್ಷ್ಮತೆ ಹಾಗೂ ಮಹತ್ವದ ಬಗ್ಗೆ ಒಳನೋಟವೂ ಇದ್ದ ಮಾನ್ ಸಿಂಗ್ ಇದರಿಂದಾಗಿ ಕೆಲಕಾಲ ಒಡಿಶ್ಶಾ ರಾಜಕಾರಣದಲ್ಲಿ ಅಕ್ಷಪ್ರಾಯನಾಗಿ ಎದ್ದುನಿಂತನು.[25]

ಪುರಿಯಿಂದ ಮರಳಿದ ಮಾನ್ ಸಿಂಗ್ ಖಿರ್ಧಾದ ಮೇಲೆ ಧಾಳಿ ನಡೆಸಲು ನಿರ್ಧರಿಸಿದನು. ಅದೇ ವೇಳೆಗೆ ಜಳೇಶ್ವರದಲ್ಲಿ ಅಫ್‌ಘಾನರು ಕೈತಪ್ಪಿಹೋದ ತಮ್ಮ ಅಧಿಕಾರವನ್ನು ಮತ್ತೆ ಪಡೆದುಕೊಳ್ಳುವ ದೃಷ್ಟಿಯಿಂದ ಮುಘಲ್ ಸೈನ್ಯದ ಮೇಲೆ ಕೊನೆಗೊಂದು ಸಲ ಹಲ್ಲೆ ನಡೆಸಿದರು. ಮಾನ್‌ಸಿಂಗ್ ಅವರನ್ನು ಸದೆಬಡಿದನು. ಬಳಿಕ ರಾಮಚಂದ್ರನಿಗೆ ನೆರವು ನೀಡಿದ ಕಾಲುವಾಪಾದಾ, ಸಹಜಪಲ, ಖಾರಾಜಲ, ಇತ್ಯಾದಿ ಕೋಟೆಗಳ ಗಡಜಾತರನ್ನು ಸೋಲಿಸಿ ಖಿರ್ಧಾದ ಕೋಟೆಯನ್ನು ಸುತ್ತುವರಿದುಕೊಂಡನು. ಆದರೆ ಯುದ್ಧ ನಡೆಯಲಿಲ್ಲ. ಅಕ್‌ಬರ್‌ನ ಹಸ್ತಕ್ಷೇಪದಿಂದಾಗಿ ಈ ಸಂಘರ್ಷವು ಅಲ್ಲಿಯೇ ಮುಕ್ತಾಯ ಪಡೆಯಿತು. ಗೋಲ್ಕೊಂಡಾದ ವಿರುದ್ಧ ಹೋರಾಡಲು ರಾಮಚಂದ್ರ ಹಾಗೂ ಅವನ ಗಡಜಾತ ಮಿತ್ರರ ನೆರವು ಅಗತ್ಯವೆಂದು ಅಕ್‌ಬರ್‌ಗೆ ತೋರಿರಬಹುದು. ಆದ್ದರಿಂದ ಖಿರ್ಧಾದ ಕೋಟೆಯನ್ನು ಮುತ್ತಿಗೆ ಹಾಕಲು ಮುಂದಾದ ಮಾನ್ ಸಿಂಗ್‌ಗೆ ಛೀಮಾರಿ ಹಾಕುತ್ತ ಕೂಡಲೆ ಸಂಘರ್ಷವನ್ನು ಕೊನೆಗೊಳ್ಳಿಸಬೇಕೆಂಬ ಆದೇಶವಿತ್ತ ಅವನ ಪತ್ರ ಬಂತು. ಅಕ್‌ಬರ್‌ನ ಆದೇಶದಂತೆ ರಾಮಚಂದ್ರನೊಂದಿಗೆ ಸಂಧಿ ಮಾಡಿಕೊಳ್ಳಲು ಮಾನ್ ಸಿಂಗ್ ಸಿದ್ಧನಾದನು.[26]

ಇದಾದ ಬಳಿಕ ಮುಂದಿನ ಗಜಪತಿ ಯಾರು ಎಂಬ ಪ್ರಶ್ನೆ ತಲೆಯೆತ್ತಿರಬಹುದು. ಗೋಲ್ಕೊಂಡಾದ ಸೈನ್ಯವು 1590ರ ಮಾರ್ಚ್ ತಿಂಗಳಲ್ಲಿ ದಕ್ಷಿಣ ಒಡಿಶ್ಶಾದ ಗಂಜಾಂ



ದಿಬ್ಯ ಸಿಂಗ್ ದೇಬ್
(ಈಗಿನ ಗಜಪತಿ)



ಪೊತನೂರಿನಲ್ಲಿ ಕೃಷ್ಣರಾಯ ನಾಟಿದ ವಿಜಯಸ್ತಂಭ



ಚೇರಾ ಪಹಾರದಲ್ಲಿ ಮಗ್ನರಾದ ಈಗಿನ ಗಜಪತಿ ದಿಬ್ಯ ಸಿಂಗ್ ದೇಬ್

ಜಿಲ್ಲೆಯ ಅಠಗಡ ವರೆಗಿನ ಪ್ರದೇಶವನ್ನು ವಶಪಡಿಸಿಕೊಂಡಿತ್ತು. ಈ ಸೈನ್ಯದ ಮುಖಂಡನು ಆ ಸಂದರ್ಭದಲ್ಲಿ ಅಲ್ಲಿ ಸರೋವರವೊಂದನ್ನು ನಿರ್ಮಿಸಿದ್ದ. ಪುರಿಯನ್ನು ತಮ್ಮದಾಗಿಸಿಕೊಂಡು ಒಡಿಶ್ಶಾದಲ್ಲಿ ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಳ್ಳುವ ಲಕ್ಷ್ಯವೊಂದು ಖುತ್ಬ್ ಶಾಹಿಗಳಿಗೆ ಇದ್ದಿರಬಹುದು. ಮಾನ್ ಸಿಂಗ್ ಪುರಿಯನ್ನೂ ಒಳಗೊಂಡ ಒಡಿಶ್ಶಾದ ಅಫ್‌ಘಾನ್ ನಿಯಂತ್ರಿತ ಪ್ರದೇಶಗಳನ್ನು ಮುಗಲ್ ಬಂದಿಯಾಗಿ ಪರಿವರ್ತಿಸಿದ್ದು ಈ ಸಂದರ್ಭದಲ್ಲಿಯೇ.[27]

ಹೀಗಿರುವಾಗ 1568ರಲ್ಲಿ ನಿಧನ ಹೊಂದಿದ ಮುಕುಂದನ ಸೋದರರಲ್ಲಿ ಒಬ್ಬನಾದ ನೃಸಿಂಹ ಎಂಬಾತ ತನ್ನ ನೆಲೆಯಾದ ರಾಜಮಂಡ್ರಿಯಿಂದ ಅಠಗಡಕ್ಕೆ ಆಗಮಿಸಿದ. ಗಜಪತಿಯ ಸ್ಥಾನವನ್ನಲಂಕರಿಸುವ ಮಹತ್ವಾಕಾಂಕ್ಷೆ ಇವನದಾಗಿತ್ತು. ಅಠಗಡ ಹಾಗೂ ಸುತ್ತಮುತ್ತಲ ಕೆಲವು ಪ್ರಮುಖ ಕೇಂದ್ರಗಳನ್ನು ವಶಪಡಿಸಿಕೊಂಡ ಇವನು ಅಲ್ಲಿ ಶಾಸನ ಹೊರಡಿಸಿ ತನ್ನನ್ನು ದಿವ್ಯ ಅವತಾರ ಎಂದೂ ಗಜಪತಿ ನರಸಿಂಹದೇವ ಎಂದೂ ಘೋಷಿಸಿಕೊಂಡ. ಶಾಸನದಲ್ಲಿ ತನ್ನನ್ನು ಉತ್ಕಲ ಸಾಮ್ರಾಜ್ಯದ ಭೂಭುಜನೆಂದೂ ಗಜಪತಿ ಸಿಂಹಾಸನದ ಪಾಲಕನೆಂದೂ ಹೇಳಿಕೊಂಡಿರುವುದನ್ನು ಕಾಣಬಹುದು.[28]

ಆದರೆ ಗಜಪತಿ ಸ್ಥಾನವು ನೃಸಿಂಹನಿಗಾಗಲಿ ಖುತ್ಬ್ ಶಾಹಿ ಅರಸನಿಗಾಗಲಿ ದಕ್ಕಲಿಲ್ಲ. ಮುಕುಂದನ ಮತ್ತೊಬ್ಬ ಮಗನೂ ಈ ಸ್ಥಾನಕ್ಕೆಂದು ಹವಣಿಸಿರಬಹುದು. ಮುಕುಂದನು ಬದುಕಿದ್ದಾಗ ಅವನು ಅಫ್‌ಘಾನರ ವೈರಿಯಾಗಿದ್ದ ಕಾರಣ ಅಕ್‌ಬರ್ ಅವನೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದ. ಬಹುಶಃ ಈ ಹಳೆಯ ಮೈತ್ರಿಯ ಹೆಸರಲ್ಲಿ ಈಗ ಮುಕುಂದನ ಮಗ ಗಜಪತಿ ಸ್ಥಾನವನ್ನು ಬೇಡುತ್ತ ದಿಲ್ಲಿಗೆ ಹೋದನೆಂದು ಮಾದಳಾಪಾಂಜಿ ದಾಖಲಿಸುತ್ತದೆ.[29] ಆದರೆ ಅದರಿಂದ ಅವನಿಗೆ ಪ್ರಯೋಜನವೇನೂ ಆಗಲಿಲ್ಲ. 1592ರಲ್ಲಿ ರಾಮಚಂದ್ರನೊಂದಿಗೆ ನಡೆದ ಒಪ್ಪಂದದಲ್ಲಿ ಅವನನ್ನೇ ಮಾನ್ ಸಿಂಗ್ ಗಜಪತಿಯಾಗಿ ನೇಮಿಸಿದ. ಈ ನೇಮಕಾತಿಯ ಮುನ್ನ ಮಾನ್ ಸಿಂಗ್ ಅಕ್‌ಬರ್‌ನ ಸಲಹೆಯನ್ನು ಪಡೆದಂತೆ ತೋರುತ್ತದೆ. ಗಜಪತಿ ಸ್ಥಾನವಷ್ಟೇ ಅಲ್ಲದೆ ಈ ಒಪ್ಪಂದದಿಂದ ರಾಮಚಂದ್ರನು ಮಹಾರಾಜ ಎಂಬ ಬಿರುದನ್ನೂ, 3500 ಸವಾರ್‌ಗಳನ್ನೊಳಗೊಂಡ 500ರ ಪದವಿಯನ್ನೂ, ಎಪ್ಪತ್ತೊಂದು ಕೋಟೆಗಳನ್ನೊಳಗೊಂಡ ಖುರ್ಧಾ ಪ್ರಾಂತ್ಯದ ನಿಯಂತ್ರಣವನ್ನೂ, ಪುರಿಯನ್ನೊಳಗೊಂಡ ಲಿಂಬಾಯಿ, ರೆಹಾಂಗ, ಸೆರಾಯಿ, ಚಾಬಿಸ್‌ಕುಡ, ಈ ನಾಲ್ಕು ಪರ್‌ಗಣಾಗಳ ಜ಼ಮೀನ್‌ದಾರಿಯನ್ನೂ ಪಡೆದುಕೊಂಡ. ಒಟ್ಟಾರೆಯಾಗಿ 13000 ಚ.ಮೈಲಿ ವಿಸ್ತಾರದ ರಾಜ್ಯವೊಂದು ಅವನ ನಿಯಂತ್ರಣಕ್ಕೆ ಬಂತು.[30] ಸೂರ್ಯವಂಶಿ ರಾಜ್ಯದ ವಿಸ್ತಾರದ ಎದಿರು ಇದು ಏನೇನೂ ಆಗಿರಲಿಲ್ಲವಾದರೂ ಅಂದಿನ ಒಡಿಶ್ಶಾದ ಅತಿದೊಡ್ಡ ರಾಜ್ಯ ಇದಾಗಿತ್ತು. ಬದಲಿಗೆ ರಾಮಚಂದ್ರ ತನ್ನ ಮಗಳನ್ನು ಮಾನ್ ಸಿಂಗ್‌ಗೆ ವಧುವಾಗಿ ಧಾರೆಯಿತ್ತ. ಹೀಗೆ ಭೋಯಿ ವಂಶ ಅಥವಾ ಖುರ್ಧಾ ರಾಜವಂಶವು ಗಜಪತಿಯಾಗಿ ಮನ್ನಣೆ ಪಡೆಯಿತು. ಖುರ್ಧಾದ ಅರಸು ಕಪಿಲೇಂದ್ರ, ಪುರುಷೋತ್ತಮ, ಪ್ರತಾಪರುದ್ರರಂತೆ ಜಗನ್ನಾಥನ ಆದ್ಯಸೇವಕನಾದನು. ಇಂದು ಆದ್ಯಸೇವಕ ಸ್ಥಾನ ಪಡೆದಿರುವ ಪುರಿಯ ರಾಜರು ಈ ರಾಮಚಂದ್ರನೆಂಬ ದ್ವಿತೀಯ ಇಂದ್ರದ್ಯುಮ್ನನ ವಂಶಜರು.

## ಅಡಿಟಿಪ್ಪಣಿಗಳು

1. ಈ ಕುರಿತು ಎರಡು ಭಿನ್ನಧಾರೆಯ ಚಿಂತನೆಗಳಿವೆ. ನೊಬೋರು ಕಾರಾಶಿಮಾ ಒಂದು ಧಾರೆಯ ಪ್ರತಿನಿಧಿಯಾಗಿದ್ದರೆ ಸಂಜಯ್ ಸುಬ್ರಹ್ಮಣ್ಯಂ ಇನ್ನೊಂದರ ಪ್ರಮುಖ ವಕ್ತಾರರಾಗಿದ್ದಾರೆ. ನೋಡಿ, Noboru Karashima, *Towards a New Formation: South Indian Society under Vijayanagar Rule*, Oxford University Press, New Delhi, 1992 ಮತ್ತು Sanjay Subramanyam, *The Political Economy of Commerce: Southern India 1500-1650*, Cambridge University Press, Cambridge, 1990a. ಉಳಿದಂತೆ, ಗಮನಿಸಬೇಕಾದ ಪ್ರಮುಖ ಬರಹಗಳೆಂದರೆ Frank Perlin, 'Proto-Industrialization and Pre-Colonial South Asia', *Past and Present*, 98, pp. 30-95; Velcheru Narayana Rao, David Shulman and Sanjay Subrahmanyam, *Symbols of Substance: Court and State in Nayaka-Period Tamil Nadu*, Oxford University Press, New Delhi, 1992; Burton Stein, *Peasant State and Society in Medieval South India*, Oxford University Press, New Delhi, 1980; *Idem*, *Vijayanagara*, Cambridge University Press, Cambridge, 1989; *Andre Wink, Al-Hind: The Making of the Indo-Islamic World*, (2 vols), E.J. Brill, Leiden, 1990; Sanjay Subrahmanyam and David Shulman, 'The Men Who Would Be King? The Politics of Expansion in Early Seventeenth-Century Northern Tamilnadu, *Modern Asian Studies*, 24 (2), pp. 225-248; Sinnappah Arasaratnam, 'Indian Commercial Groups and European Traders, 1600-1800: Changing Relationships in Southeastern India, *South Asia*, new series, 1 (2), pp. 42-54, Ashin Dasgupta, *Merchants of Maritime India 1500-1800*, Variorum, Aldershot, 1994; Muzaffar Alam and Sanjay Subrahmanyam, *Indo-Persian Travels in the Age of Discoveries, 1400-1800*, Cambridge University Press, New Delhi, 2008. 1960 ಹಾಗೂ 70ರ ದಶಕದಲ್ಲಿ ಈ ಯುಗದ ಕುರಿತ ಪ್ರಮಾಣಪ್ರಾಯ ಗ್ರಂಥವಾಗಿದ್ದದ್ದು Irfan Habib, *Agrarian System of Mughal India*, Oxford University Press, Bombay, 1963.
2. John F. Richards, *Mughal Administration in Golconda*, Oxford University Press, Oxford, 1975.
3. Sanjay Subrahmanyam, *The Portuguese Empire in Asia, 1500-1700: A Political and Economic History*, (2nd edition), Wiley-Blackwell, New Sussex, 2012.
4. Karashima, ಪೂರ್ವೋಕ್ತ ಮತ್ತು Velcheru Narayana Rao, David Shulman and Sanjay Subrahmanyam ಪೂರ್ವೋಕ್ತ.
5. Shireen Moosvi, 'The Silver Influx, Money Supply, Prices and Revenue-Extraction in Mughal India, *JESHO*, 30 (1), 1987, pp. 47-94; Irfan Habib, 'The Currency System of the Mughal Empire (1556-1707), *Medieval India Quarterly*, 4 (1-2), 1960; Aziza Hasan, 'The Silver Currency Output of the Mughal Empire and Prices in India during the 16th and 17th Centuries, *IESHR*, 4(1), 1969, pp. 85-116; Najaf Haidar, 'Precious Metal Flows and Currency Circulation in the Mughal Empire' *JESHO*, 39 (1), 1996, pp. 298-364. ಕೆಲವು ಮಹತ್ವದ ಲೇಖನಗಳ ಸಂಕಲನಕ್ಕೆ ನೋಡಿ, John F. Richards (ed), *The Imperial Monetary System of Mughal India*, Oxford University Press, Delhi, 1987 ಮತ್ತು Sanjay Subrahmanyam (ed), *Merchants, Markets and the State in Early Modern India*, Oxford University Press, New Delhi, 1990b.
6. Subrahmanyam, 1990a (ಪೂರ್ವೋಕ್ತ)
7. Subrahmanyam 1957 (ಪೂರ್ವೋಕ್ತ)ದಲ್ಲಿ ಇದರ ಸಮೀಕ್ಷೆಯಿದೆ. ಜೊತೆಗೆ ನೋಡಿ, Dipti Ray, *Prataparudradeva: The Last Great Suryavamsi King of Orissa*, Northern Book Centre, New Delhi, 2007.

8. ಇಲ್ಲೇ.
9. *ಮನುಚರಿತ್ರ*, 1.39.
10. ಇಲ್ಲೇ, 1.37.
11. ಇದು ಕುಮಾರ ಧೂರ್ಜಟಿ ಬಿರುದಿನ ವೆಂಕಟರಾಯನ ಕೃಷ್ಣರಾಯ ವಿಜಯಂನಲ್ಲಿ ಬರುವ ಪ್ರಸಂಗ. ಇದರ ಸಾರಾಂಶಕ್ಕೆ ನೋಡಿ, S. Krishnaswami Ayyangar, *Sources of Vijayanagar History Selected and Edited for the University*, University of Madras, Madras, 1919, pp. 129-132.
12. ಆಮುಕ್ತಮಾಲ್ಯದಾ, 1.36.
13. *ಮನುಚರಿತ್ರ*, 1.38.
14. ದೀಪ್ತಿ ರಾಯ್ ಅವರು ತುಕ್ಕಾದೇವಿಯೊಂದಿಗಿನ ರಾಯನ ವಿವಾಹದ ಪ್ರಸಂಗವನ್ನು ಕೇವಲ ದಂತೆಕಥೆ ಎಂದು ಅಲ್ಲಗಳೆದಿದ್ದಾರೆ. ನೋಡಿ, Ray ಪೂರ್ವೋಕ್ತ, pp. 37-38.
15. Subrahmanyam 1957 (ಪೂರ್ವೋಕ್ತ), Ray ಪೂರ್ವೋಕ್ತ.
16. Mubayi, ಪೂರ್ವೋಕ್ತ, pp. 37-39.
17. ಅಕ್ಬರ್ ನಾಮಾ, ಭಾಗ–2, pp. 381, ಮುಂದುವರೆದು
18. Eschmann, Kulke and Tripathi, ಪೂರ್ವೋಕ್ತ, pp. 322.
19. ಇಲ್ಲೇ, ಟಿಪ್ಪಣಿ 7.
20. ಇಲ್ಲೇ.
21. Mubayi, ಪೂರ್ವೋಕ್ತ, ಪು. 39.
22. Eschmann, Kulke and Tripathi, ಪೂರ್ವೋಕ್ತ, pp. 334, ಮುಂದುವರೆದು; Mubayi, ಪೂರ್ವೋಕ್ತ, pp. 39-40.
23. Eschmann, Kulke and Tripathi, ಪೂರ್ವೋಕ್ತ, pp. 324, ಮುಂದುವರೆದು.
24. Mubayi, ಪೂರ್ವೋಕ್ತ, pp. 39-40.
25. ಇಲ್ಲೇ, pp. 50-51; Eschmann, Kulke and Tripathi, ಪೂರ್ವೋಕ್ತ, pp. 326-327.
26. ಇಲ್ಲೇ.
27. Eschmann, Kulke and Tripathi, ಪೂರ್ವೋಕ್ತ, pp. 324.
28. ಇಲ್ಲೇ, pp. 324-325.
29. ಇಲ್ಲೇ, pp. 326.
30. ಇಲ್ಲೇ, pp. 327-328; Mubayi, ಪೂರ್ವೋಕ್ತ, pp. 51.

■

# ಸರ್. ಅಲೆಕ್ಸಾಂಡರ್ ಕನ್ನಿಂಗ್‌ಹ್ಯಾಮ್ ಮತ್ತು ಅವರ ಪುರಾತತ್ವ ಅಧ್ಯಯನಗಳು : ಕಿರು ನೋಟ

❑ ಎಸ್.ಕೆ. ಅರುಣಿ
ಉಪ-ನಿರ್ದೇಶಕ
ಐ.ಸಿ.ಹೆಚ್.ಆರ್. ಬೆಂಗಳೂರು.

**ಭಾ**ರತೀಯ ಪುರಾತತ್ವ ಅಧ್ಯಯನಕ್ಕೆ ಹಲವಾರು ವಿದ್ವಾಂಸರು ಹಾಗೂ ಚಿಂತಕರು ಕೊಡುಗೆಗಳನ್ನು ನೀಡಿದ್ದಾರೆ. ಆರಂಭದಲ್ಲಿ ಐರೋಪ್ಯ ವಿದ್ವಾಂಸರು (ಓರಿಯಂಟಲಿಸ್ಟ್) ತದನಂತರ ಭಾರತೀಯ ವಿದ್ವಾಂಸರು ಪುರಾತತ್ವ ಅಧ್ಯಯನಗಳಲ್ಲಿ ತೊಡಗಿಕೊಂಡು ಪ್ರಾಚೀನ ಭಾರತದ ಇತಿಹಾಸ ಮತ್ತು ಸಂಸ್ಕೃತಿಗಳನ್ನು ಗುರುತಿಸುವುದರ ಜೊತೆಗೆ ವೈಜ್ಞಾನಿಕ ಸಂಶೋಧನೆಗಳನ್ನು ಕೈಕೊಂಡಿದ್ದಾರೆ. ಇವುಗಳಿಗೆ ಮುನ್ನುಡಿ ಒದಗಿಸಿದ್ದು 1784ರಲ್ಲಿ ಕಲ್ಕತ್ತಾದಲ್ಲಿ ಸ್ಥಾಪನೆಯಾದ 'ಏಶಿಯಾಟಿಕ್ ಸೊಸೈಟಿ' ಸಂಸ್ಥೆ. ಇದು ಭಾರತೀಯ ಸಾಹಿತ್ಯ, ಭಾಷೆ, ಸಂಸ್ಕೃತಿ, ಚರಿತ್ರೆ ಮತ್ತು ಜನಾಂಗೀಯ ಅಧ್ಯಯನಗಳಿಗೆ ಒಂದು ದೊಡ್ಡ ವೇದಿಕೆಯನ್ನು ವಿದ್ವಾಂಸರಿಗೆ ಒದಗಿಸಿತು. ಈ ಸಂಸ್ಥೆಯ ಸಂಸ್ಥಾಪಕರಾದ ವಿಲಿಯಮ್ ಜೋನ್ಸ್ ಹಾಗೂ ಇದರ ಕಾರ್ಯದರ್ಶಿಯಾದ ಜೇಮ್ಸ್ ಪ್ರಿನ್ಸೆಪ್, ಜೇಮ್ಸ್ ಫರ್ಗೂಸನ್, ಜೇಮ್ಸ್ ಬರ್ಗೆಸ್, ಬೂಹ್ಲರ್, ಮುಂತಾದವರು ಇಂದಿಗೂ ಅವಿಸ್ಮರಣಿಯರು. ಇದೇ ಸಾಲಿನಲ್ಲಿ ಬರುವ ಮತ್ತೊಬ್ಬ ವಿದ್ವಾಂಸ ಮತ್ತು ಪುರಾತತ್ವಜ್ಞ ಸರ್ ಅಲೆಕ್ಸಾಂಡರ್ ಕನ್ನಿಂಗ್‌ಹ್ಯಾಮ್. ಇವರು ಮೂಲತಃ ಸ್ಕಾಟ್‌ಲ್ಯಾಂಡ್ ಪ್ರಾಂತ್ಯದವರಾಗಿದ್ದರೂ ಬ್ರಿಟಿಷ್ ಸೈನ್ಯದಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಸೇವೆಗೆ ಸೇರಿ ಭಾರತಕ್ಕೆ ಬಂದು ಸೈನ್ಯದ ಕೆಲಸದೊಂದಿಗೆ ಭಾರತೀಯ ಇತಿಹಾಸ ಮತ್ತು ಪುರಾತತ್ವ ವಿಷಯಗಳಿಗೆ ಅಪೂರ್ವ ಕೊಡುಗೆಗಳನ್ನು ನೀಡಿದ್ದಾರೆ. ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ [*Archaeological Survey of India*]ಯ ಪ್ರಥಮ



ಅಲೆಕ್ಸಾಂಡರ್ ಕನ್ನಿಂಗ್‌ಹ್ಯಾಮ್ (1814-1893)

ಮಹಾನಿರ್ದೇಶಕರಾಗಿ ಭಾರತದಲ್ಲಿ ಪುರಾತತ್ವ ಇಲಾಖೆಯನ್ನು (1861ರಲ್ಲಿ) ಸ್ಥಾಪಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಪ್ರಸ್ತುತ ವರ್ಷ(2014) ಇವರ ದ್ವಿತೀಯ ಜನ್ಮಶತಮಾನೋತ್ಸವ ವರ್ಷವಾಗಿದೆ. ಈ ಸಂದರ್ಭದಲ್ಲಿ ಇವರ ಪರಿಚಯ ಮತ್ತು ಪುರಾತತ್ವ ಅಧ್ಯಯನಗಳ ಒಂದು ಪಕ್ಷಿ ನೋಟವನ್ನು ಈ ಲೇಖನದ ಮೂಲಕ ಪ್ರಸ್ತುತ ಪಡಿಸಲು ಪ್ರಯತ್ನಿಸಲಾಗಿದೆ.

**ಪರಿಚಯ:**

ಅಲೆಕ್ಸಾಂಡರ್ ಕನ್ನಿಂಗ್‌ಹ್ಯಾಮ್(1814-1893)ರು ಕವಿ ಹಾಗೂ ಉತ್ತಮ ಬರಹಗಾರರಾದ ಆ್ಯಲೆನ್ ಕನ್ನಿಂಗ್‌ಹ್ಯಾಮ್ (1784-1842) ಅವರ ಎರಡನೆಯ ಮಗ. ಇವರ ಸಹೋದರರು ಕೂಡ ಹೆಸರಾಂತ ಬರಹಗಾರರು. ಭಾರತದ ಬಗ್ಗೆ ಪರಿಚಯ ಹೊಂದಿದ್ದವರು. ಕನ್ನಿಂಗ್‌ಹ್ಯಾಮ್ ಅವರ ಮೊದಲನೆಯ ಸಹೋದರ ಸಿಖ್ ಯುದ್ಧಗಳನ್ನು ಕುರಿತು ಗ್ರಂಥವನ್ನು ರಚಿಸಿದ್ದಾರೆ. ಕನ್ನಿಂಗ್‌ಹ್ಯಾಮ್ ತನ್ನ ವಿದ್ಯಾಭ್ಯಾಸವನ್ನು ಇಂಗ್ಲೆಂಡಿನ

ರಾಯಲ್ ಇಂಜಿನಿಯರ್ಸ್ ಎಸ್ಟೇಟ್ ಶಿಕ್ಷಣ ಸಂಸ್ಥೆಯಲ್ಲಿ ಪೂರೈಸಿದರು. ನಂತರ ಉದ್ಯೋಗಕ್ಕಾಗಿ ಈಸ್ಟ್ ಇಂಡಿಯಾ ಕಂಪನಿಯ ಸೈನ್ಯದಲ್ಲಿ ಪ್ರಯತ್ನಿಸಿ, ಬೆಂಗಾಲ್ ಇಂಜಿನಿಯರ್ಸ್ ರೆಜಿಮೆಂಟ್ ಸೇರುತ್ತಾರೆ (1833). ಭಾರತಕ್ಕೆ ತನ್ನ 19ನೆಯ ವಯಸ್ಸಿನಲ್ಲಿ ಬಂದ ಕನ್ನಿಂಗ್‌ಹ್ಯಾಮ್ 1885ರವರೆಗೆ ಸುಮಾರು ಐವತ್ತು ವರ್ಷಗಳ ಕಾಲ ಸೈನಿಕನಾಗಿ, ನಂತರ ಪುರಾತತ್ವ ಅಧಿಕಾರಿಯಾಗಿ ಸಲ್ಲಿಸಿದ ಅಪೂರ್ವ ಸೇವೆಗಳಿಂದ ಹೆಸರುವಾಸಿಯಾದರು. ಇವರ ಸೈನ್ಯದ ಸಾಧನೆಗಳು ಕೂಡ ಗುರುತರವಾದದ್ದು. ಕಾಶ್ಮೀರ, ಲಡಾಖ್, ಬಲೂಚಿಸ್ಥಾನ, ಅಫಘಾನಿಸ್ಥಾನ, ಮಧ್ಯ ಪ್ರದೇಶ, ಉತ್ತರ ಪ್ರದೇಶ, ಬಂಗಾಳ, ಬಿಹಾರ, ಮುಂತಾದ ಸ್ಥಳಗಳಲ್ಲಿ ನಡೆದ ಯುದ್ಧಗಳಲ್ಲಿ ಭಾಗವಹಿಸಿ ವಿಜಯಸಾಧಿಸಿದ ಹಲವಾರು ಉದಾಹರಣೆಗಳಿವೆ. 1857ರಲ್ಲಿ ನಡೆದ ಬ್ರಿಟಿಷ್ ವಿರೋಧಿ ದಂಗೆಗಳ ಕಾಲದಲ್ಲಿ ಬ್ರಿಟಿಷ್ ಸೈನ್ಯದ ಮುಂಚೂಣಿಯಲ್ಲಿದ್ದರು.

**ಕನ್ನಿಂಗ್‌ಹ್ಯಾಮ್‌ರ ಪುರಾತತ್ವ ಅಧ್ಯಯನಗಳು:**

ಪ್ರಾಚೀನ ನಾಣ್ಯಗಳ ಸಂಗ್ರಹದ ಗೀಳಿನೊಂದಿಗೆ ಭಾರತದ ಇತಿಹಾಸ ಅಧ್ಯಯನದತ್ತ ಒಲವು ಬೆಳೆಸಿಕೊಂಡ ಕನ್ನಿಂಗ್‌ಹ್ಯಾಮರಿಗೆ ಜೇಮ್ಸ್ ಪ್ರಿನ್ಸೆಪ್‌ರ ಮತ್ತಷ್ಟು ಪ್ರೋತ್ಸಾಹ ಸಿಕ್ಕಿತು. ಇದರ ಪರಿಣಾಮ, ಭಾರತಕ್ಕೆ ಬಂದ ಮರುವರ್ಷವೇ (1834) ಇಲ್ಲಿ ದೊರೆತ ರೋಮನ್ ನಾಣ್ಯಗಳ ಬಗ್ಗೆ 'ಏಶಿಯಾಟಿಕ್ ಸೊಸೈಟಿ'ಯ ನಿಯತಕಾಲಿಕೆಯಲ್ಲಿ ಲೇಖನ ಬರೆದರು. ಭಾರತದ ಇತಿಹಾಸ ಕುರಿತ ಇವರ ಬರವಣಿಗೆ ಇಲ್ಲಿಂದ ಆರಂಭವಾಗಿದ್ದು ಸುಮಾರು 50 ವರ್ಷಗಳ ಕಾಲ (1833–85) ನಿರಂತರವಾಗಿತ್ತು. ಇಲ್ಲಿಯ ಭೌಗೋಳಿಕ ಲಕ್ಷಣಗಳನ್ನು ಚೆನ್ನಾಗಿ ಅರಿತಿದ್ದ ಇವರು, ಟಾಲೆಮಿ, ಫಾಹಿಯಾನ್ ಮತ್ತು ಹ್ಯೂಯೆನ್‌ತ್ಸಾಂಗ್‌ರ ಪ್ರವಾಸ ಕಥನಗಳನ್ನು ಆಕರಗಳನ್ನಾಗಿಸಿಕೊಂಡು ಅವರ ಹೆಜ್ಜೆ ಮೂಡದ ಹಾದಿಯಲ್ಲಿ ಸಾಗಿ ಇವರು ದಾಖಲಿಸಿದ ಅನೇಕ ಪ್ರಾಚೀನ ಭಾರತ ಸ್ಥಳಗಳನ್ನು ಗುರುತಿಸಿದ್ದು, ಅವರ ಹೆಮ್ಮೆಯ ಸಾಧನೆಗಳಲ್ಲೊಂದು. ಪ್ರಾಚೀನ ಬೌದ್ಧ ಅವಶೇಷಗಳ ಶೋಧನೆ ಇವರ ಹಿರಿಮೆಯನ್ನು ಮತ್ತಷ್ಟು ಹೆಚ್ಚಿಸಿತು. 1833ರಲ್ಲಿ ಸೈನ್ಯದ ಸೇವೆಯಲ್ಲಿರುವಾಗಲೇ ಇಲಾಖೆಯ ಪುರಾತತ್ವದ ಸರ್ವೇಕ್ಷಣಾಧಿಕಾರಿಯಾಗಿ, ಅನಂತರ ಅದರ ಮಹಾ-ನಿರ್ದೇಶಕರಾಗಿ ನೇಮಕಗೊಳ್ಳುವುದರ ಮೂಲಕ ತಮ್ಮ ಅಧ್ಯಯನ ಕಾರ್ಯಗಳನ್ನು ತೀವ್ರಗೊಳಿಸಿಕೊಂಡರು. ಈ ಹಿನ್ನೆಲೆಯಲ್ಲಿ ಇವರ ಅಧ್ಯಯನಗಳನ್ನು ಮೂರು ಹಂತಗಳಾಗಿ ವಿಂಗಡಿಸಬಹುದು.

(ಅ) ಸೈನಿಕ ವೃತ್ತಿಯೊಂದಿಗೆ (1833–60) ಕೈಗೊಂಡ ಪುರಾತತ್ವ ಅಧ್ಯಯನಗಳು.

(ಆ) ಭಾರತೀಯ ಪುರಾತತ್ವ ಸರ್ವೇಕ್ಷಣಾಧಿಕಾರಿಯಾಗಿ (1861–1865) ಕೈಗೊಂಡ ಅಧ್ಯಯನಗಳು ಮತ್ತು

(ಇ) ಇಲಾಖೆಯ ಪ್ರಥಮ ಮಹಾ–ನಿರ್ದೇಶಕರಾಗಿ (1871–1885) ಕೈಗೊಂಡ ಪುರಾತತ್ವ ಅನ್ವೇಷಣೆ ಹಾಗೂ ಅಧ್ಯಯನಗಳು.

**ಸೈನಿಕ–ಸಂಶೋಧಕ:**

ಸಿಂಧ್, ಅಫಘಾನಿಸ್ತಾನ, ಪಂಜಾಬ್, ಕಾಶ್ಮೀರ, ಲಡಾಖ್ ಹೀಗೆ ಭಾರತದ ವಾಯುವ್ಯ ಗಡಿಯಲ್ಲಿ, ತದನಂತರ, ಮಧ್ಯಪ್ರದೇಶದ ಸಾಂಚಿ ಪ್ರದೇಶಗಳಿಗೆ ಈತನ ಸೇವೆ ಸೀಮಿತವಾಗಿತ್ತು. ಆದರೆ, ಸೈನಿಕ ವೃತ್ತಿಯ ಬಿಡುವಿನ ವೇಳೆಯನ್ನು ಹಳೆಯ ನಾಣ್ಯ,

ಪ್ರಾಚೀನ ಬೌದ್ಧ ಸ್ತೂಪಗಳನ್ನು ಶೋಧಿಸಲು ಮೀಸಲಿಟ್ಟರು. 1834ರಲ್ಲಿ ರೋಮನ್ ನಾಣ್ಯಗಳ ಕುರಿತು 'ಏಶಿಯಾಟಿಕ್ ಸೊಸೈಟಿ'ಯ ನಿಯತಕಾಲಿಕೆಯಲ್ಲಿ ಲೇಖನ ಬರೆದಿದ್ದೂ ಆಯ್ತು. ಕಾಶ್ಮೀರ ಪ್ರದೇಶದಲ್ಲಿ ಸುಮಾರು ಒಂದು ಸಾವಿರ ಪ್ರಾಚೀನ ನಾಣ್ಯಗಳನ್ನು ಶೋಧಿಸಿ, ಅವುಗಳನ್ನು ಆಧರಿಸಿ ಕುಶಾಣ, ಹೂಣ, ಇಂಡೊ-ಬ್ಯಾಕ್ಟ್ರಿಯನ್ ಮತ್ತು ಇಂಡೊ-ಸ್ಕಿತಿಯನ್‌ರ ಪ್ರಾಚೀನ ಭಾರತದ ಚರಿತ್ರೆಯನ್ನು ಕಟ್ಟಿಕೊಡುತ್ತಾರೆ. ಕಾಶ್ಮೀರದ ಪ್ರಾಚೀನ ದೇವಾಲಯಗಳ ಸಮೀಕ್ಷೆ ನಡೆಸಿದ್ದು ಇವರ ಮತ್ತೊಂದು ಸಾಧನೆ. *An Essay on the Arian Order of Architecture, as Exhibited in the Temples of Kashmir* ಎಂಬ ವರದಿಯನ್ನು 1848ರಲ್ಲಿ ಪ್ರಕಟಿಸಿದ್ದಾರೆ. ರಾಜಕೀಯ ಕ್ಷಿಪ್ರ ಬದಲಾವಣೆಗಳ ಹಿನ್ನೆಲೆಯಲ್ಲಿ ಬ್ರಿಟಿಷ್ ಸರ್ಕಾರ ಈತನನ್ನು ಲಡಾಖ್ ಪ್ರದೇಶದ ಗಡಿ ಗುರುತಿಸಲು ನೇಮಿಸುತ್ತದೆ. ಈ ಅವಕಾಶ ಬಳಸಿಕೊಂಡು ಈತ ಪ್ರಾಚೀನ ಭಾರತದ ಮತ್ತು ಚೀನಾ ಸಾಹಿತ್ಯಗಳ ಉಲ್ಲೇಖಗಳನ್ನು ಆಧರಿಸಿ, ಹಲವು ಪುರಾತನ ಸ್ಥಳಗಳನ್ನು ಪತ್ತೆ ಮಾಡುತ್ತಾರೆ. ಈ ವೇಳೆ ಗ್ರೀಕ್ ಚಕ್ರವರ್ತಿ ಅಲೆಕ್ಸಾಂಡರ್ ಸಂಚರಿಸಿದ ಮಾರ್ಗ ಹಾಗೂ ಕೆಲವು ಸ್ಥಳಗಳನ್ನು ಪತ್ತೆ ಹಚ್ಚಿದ್ದು ಗಮನಾರ್ಹ. ಟಾಲೆಮಿ ಉಲ್ಲೇಖಿಸುವ ಅಖಾಸ್ಸ-ರಜಿಯೊ ಮತ್ತು ಫಾಹಿಯಾನ್ ಉಲ್ಲೇಖಿಸುವ ಕಿ-ಛ್ಛ ಸ್ಥಳವೇ ಇಂದಿನ ಲಡಾಖ್ ಎಂಬುದು ಕನ್ನಿಂಗ್‌ಹ್ಯಾಮ್‌ರ ಖಚಿತ ನಿಲುವು. ಲಡಾಖ್‌ನ ಭೌಗೋಳಿಕತೆ ಮತ್ತು ಚರಿತ್ರೆ ಕುರಿತ ಕೃತಿ ರಚಿಸುವ ಇವರು ಅದನ್ನು 1854ರಲ್ಲಿ *Ladak, Physical, Statistical, and Historical with Notes of the Surrounding Countries* ಎಂಬ ಶೀರ್ಷಿಕೆಯಲ್ಲಿ ಲಂಡನ್ನಿನಿಂದ ಪ್ರಕಟಿಸುತ್ತಾರೆ. ಚೀನಾ ಯಾತ್ರಿಕರಾದ ಫಾಹಿಯಾನ್ (ಕ್ರಿ.ಶ.404–414) ಮತ್ತು ಹ್ಯೂಯೆನ್‌ತ್ಸಾಂಗ್ (ಕ್ರಿ.ಶ.630–644) ಪ್ರವಾಸ ಕಥನಗಳು ಫ್ರೆಂಚ್ ಭಾಷೆಗೆ ಭಾಷಾಂತರವಾಗಿ ಐರೋಪ್ಯ ವಿದ್ವಾಂಸರ ಗಮನ ಸೆಳೆದಿದ್ದವು. ವಾಯವ್ಯ ಗಡಿಗಳ ಪರಿಚಯವಿದ್ದ ಕನ್ನಿಂಗ್‌ಹ್ಯಾಮ್‌ಗೆ ವಿದೇಶಿ ಸಾಹಿತ್ಯ ಉತ್ತಮ ಆಕರಗಳಾಗಿ ಪರಿಣಮಿಸಿದ್ದು, ಅವುಗಳನ್ನು ಆಧರಿಸಿ ಪ್ರಾಚೀನ ಭಾರತದ ನೆಲೆಗಳನ್ನು ಗುರುತಿಸುವುದು ಸುಲಭವೆಂದು ತೋರಿತು. ಹ್ಯೂಯೆನ್‌ತ್ಸಾಂಗ್ ಉಲ್ಲೇಖಿಸುವ **'ಶೆಂಗ್-ಕಿ-ಷಿ'** ಎಂಬ ಸ್ಥಳವನ್ನು ಕನ್ನಿಂಗ್‌ಹ್ಯಾಮ್ ಈಗಿನ ಉತ್ತರಪ್ರದೇಶದ ಫರಿದಾಬಾದ್ ಜಿಲ್ಲೆಯ **'ಶಂಕಿಷಾ'** ಎಂದು ಪ್ರತಿಪಾದಿಸುತ್ತಾರೆ. ಶಂಕಿಷಾದಲ್ಲಿ ದೊರೆಯುವ ಹಲವಾರು ಪುರಾತನ ಬೌದ್ಧ ಸ್ಮಾರಕ ಮತ್ತು ಸ್ಥಳನಾಮ ಆಧರಿಸಿ ಕನ್ನಿಂಗ್‌ಹ್ಯಾಮ್ ಗುರುತಿಸಿದ ವಿದ್ವಾಂಸರಿಗೆ ಮಾತ್ರವಲ್ಲ; ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕರ ಮೆಚ್ಚುಗೆಗೂ ಪಾತ್ರರಾದರು. 1840ರಲ್ಲಿ ಚೀನಾ ಯಾತ್ರಿಕರ ಉಲ್ಲೇಖಗಳನ್ನು ಆಧರಿಸಿ ಭಾರತದಲ್ಲಿ ಸುಮಾರು 141 ಪುರಾತನ ಸ್ಥಳಗಳ ಶೋಧಿಸುತ್ತಾರೆ. ಇವನ್ನು ಆಧರಿಸಿ, 1848ರಲ್ಲಿ *"Verification of the Itinerary of Hwan Thsang through Ariana and India with Reference to Major Anderson Hypothesis of its Modern Compilation"* ಎಂಬ ಲೇಖನ ಪ್ರಕಟಿಸುತ್ತಾರೆ.

**ಸೈನಿಕನಿಂದ ಸರ್ವೇಕ್ಷಣಾಧಿಕಾರಿ ಹಂತದಲ್ಲಿ (1861–1865):**

ಏಶಿಯಾಟಿಕ್ ಸೊಸೈಟಿ (1784) ಆರಂಭವಾಗಿ ಮುಕ್ಕಾಲು ಶತಮಾನ ಪೂರೈಸಿದ್ದರೂ ಪ್ರಾಚೀನ ಅವಶೇಷಗಳ ಅನ್ವೇಷಣೆ ಮತ್ತು ಶೋಧನೆಗಳು ವಿದ್ವಾಂಸರ ವ್ಯಕ್ತಿಗತ ಆಸಕ್ತಿಯನ್ನು ಅವಲಂಬಿಸಿದ್ದವು. ಆಗ ಅವಶೇಷಗಳ ಸ್ಥಳ ಶೋಧನೆ ಹಾಗೂ ಅವುಗಳ ಕೂಲಂಕುಷ ಪರಿಶೀಲನೆಯ ವೈಜ್ಞಾನಿಕ ಕ್ರಮದ ಕೊರತೆ ಇತ್ತು. ಪ್ರಾಚೀನ ನೆಲೆಗಳ ಉತ್ಖನನಗಳು

ಸಹ ಆಕರ್ಷಕವಾದ ಮತ್ತು ಮೌಲ್ಯಯುತ ವಸ್ತುಗಳ ಸಂಗ್ರಹವನ್ನು ಗುರಿಯಾಗಿಸಿಕೊಂಡಿದ್ದವು. ಹೀಗಾಗಿ, ಉತ್ಖನನಗಳು ಗೊಂದಲದ ಗೂಡು ಎಂಬಂತೆ ಕಾಣುತ್ತಿದ್ದವು. ಆಧೀನ ಪ್ರದೇಶದ ಪ್ರಾಚೀನ ಸ್ಮಾರಕಗಳ ಬಗ್ಗೆ ಸರ್ಕಾರದ ಬಳಿ ಸೂಕ್ತ ದಾಖಲೆಗಳು ಇರಲಿಲ್ಲ. ಬ್ರಿಟಿಷ್ ಸರ್ಕಾರ ಭಾರತದ ಪ್ರಾಚೀನ ಸ್ಮಾರಕಗಳ ವಿನ್ಯಾಸಗಳ ಸಂಗ್ರಹಣೆಗೆ ವಿಶೇಷ ಆಸಕ್ತಿ ವಹಿಸಿತ್ತು. 1857ರ ಕ್ರಾಂತಿಯಿಂದಾಗಿ ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆ ರಾಣಿಯ ಹಿಡಿತಕ್ಕೆ ಬಂದಿತ್ತು. ಭಾರತದ ಸಾಂಸ್ಕೃತಿಕ ಸಂಪತ್ತಿನ ರಕ್ಷಣೆ ಬ್ರಿಟಿಷ್ ಸರ್ಕಾರದ ಪ್ರಮುಖ ಅಂಗವಾಗಿತ್ತು. 'ಭಾರತದ ಸಾಂಸ್ಕೃತಿಕ ಸಂಪತ್ತಿನ ಅನ್ವೇಷಣೆ ಮತ್ತು ಅವುಗಳ ಅಧ್ಯಯನ' ಕುರಿತು ಕನ್ನಿಂಗ್‌ಹ್ಯಾಮ್ ಸಲ್ಲಿಸಿದ ವರದಿ ಆಧರಿಸಿ ಭಾರತದ ವೈಸ್‌ರಾಯ್ ಆಗಿದ್ದ ಲಾರ್ಡ್ ಕ್ಯಾನಿಂಗ್, 1861ರಲ್ಲಿ ಪುರಾತತ್ವ ಸರ್ವೇಕ್ಷಣಾ ಇಲಾಖೆ ಸ್ಥಾಪಿಸಿದರು. ಅಷ್ಟು ಮಾತ್ರವಲ್ಲ, ಕನ್ನಿಂಗ್‌ಹ್ಯಾಮ್‌ರನ್ನೇ ಅದರ ಸರ್ವೇಕ್ಷಣೆ ಅಧಿಕಾರಿಯನ್ನಾಗಿ ನೇಮಿಸಿದರು. (ಮುಂದೆ ಇದು 'ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ'ಯಾಗಿ ಪರಿವರ್ತನೆಯಾಗುತ್ತದೆ). ಆಸಕ್ತಿಗೆ ತಕ್ಕ ಕೆಲಸ ಸಿಕ್ಕ ಕೂಡಲೇ ಮೇಜರ್ ಜನರಲ್ ಹುದ್ದೆಗೆ ರಾಜೀನಾಮೆ ನೀಡಿದ ಕನ್ನಿಂಗ್‌ಹ್ಯಾಮ್, ಪೂರ್ಣಾವಧಿ ಪುರಾತತ್ವ ಅಧಿಕಾರಿಯಾದರು. ಇತಿಹಾಸದ ಅಧ್ಯಯನಗಳು ಮೊದಲ ಬಾರಿಗೆ ಸರ್ಕಾರದ ನೇತೃತ್ವದಲ್ಲಿ ಆರಂಭಗೊಳ್ಳುವುದು ಈತನ ಕಾಲದಲ್ಲೇ ಎಂಬುದು ದಾಖಲಾರ್ಹ ಸಂಗತಿ. 450 ರೂ. ವೇತನದ ಮೇಲೆ ದೊಡ್ಡ ಹೊಣೆಗಾರಿಕೆ ನಿರ್ವಹಿಸಿದ 47 ವರ್ಷದ ಕನ್ನಿಂಗ್‌ಹ್ಯಾಮ್, ಕೇವಲ ನಾಲ್ಕು ವರ್ಷಗಳ ಅವಧಿಯಲ್ಲಿ ಸುಮಾರು 166 ಪುರಾತನ ನೆಲೆಗಳನ್ನು ಗುರುತಿಸಿ, ಉತ್ಖನನ ನಡೆಸಿ, ಪ್ರಾಚೀನ ಅವಶೇಷಗಳನ್ನು ಪತ್ತೆ ಹಚ್ಚಿದರು. ಭಾರತದ ವಾಯವ್ಯ ಗಡಿಗಳಾದ ಸಿಂಧ್, ಪಂಜಾಬ್ ಮೊದಲುಗೊಂಡು ಉತ್ತರಪ್ರದೇಶ, ಮಧ್ಯಪ್ರದೇಶ, ಬಂಗಾಳ ಪ್ರಾಂತ್ಯದವರೆಗೂ ಏಕಾಂಗಿಯಾಗಿ ಅನ್ವೇಷಣೆ ನಡೆಸಿದರು. ಪ್ರತಿ ವರ್ಷವು ಕೈಕೊಳ್ಳುವ ಅನ್ವೇಷಣೆಗಳ ಸಮಗ್ರ ಮಾಹಿತಿ ಒಳಗೊಂಡ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ಕೀರ್ತಿಯೂ ಈತನದು. ಮಹತ್ವದ ವಿಷಯ ಹಾಗೂ ಪ್ರಮುಖ ದಾಖಲೆ ಒಳಗೊಂಡ ಈ ವರದಿಗಳು 1871ರಲ್ಲಿ *'Four Reports made During* 1862-1865' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿದೆ. ಇವರು ನಾಲ್ಕು ವರ್ಷಗಳ ಅಲ್ಪಾವಧಿಯಲ್ಲಿ ಕೈಕೊಂಡ ಪುರಾತತ್ವ ಅನ್ವೇಷಣೆಗಳು ಬಹು ವಿಶೇಷವಾಗಿದ್ದು, ಹಲವು ಪುರಾತನ ನೆಲೆಗಳನ್ನು ಮೊದಲಬಾರಿಗೆ ಶೋಧಿಸಿದ ಹೆಗ್ಗಳಿಕೆಗೆ ಪಾತ್ರರಾದರು. ಶೋಧನೆಯಾದ ನೆಲೆಗಳಲ್ಲಿ ಕೆಲವನ್ನು ಬೌದ್ಧ ಇತಿಹಾಸದ ಮೂಲ ತಾಣಗಳಾಗಿಯೂ ಗುರುತಿಸಿದ್ದು, ಬುದ್ಧಗಯಾ, ನಳಂದಾ, ರಾಜಗೀರ್, ಪಾವಾ, ಕಾಶಿಯಾ ಕುಶಿನಗರ, ವೈಶಾಲಿ, ಭಖಿರಾ, ಸಾರನಾಥ, ದೆಹಲಿ, ಖಲ್ಸಿ, ಶ್ರಾವಸ್ತಿ, ಕೌಶಾಂಬಿ, ಶಂಕಿಷಾ, ತಕ್ಷಶಿಲಾ, ಮಣಿಕ್ಯಾಲ, ಅಹಿಚ್ಛತ್ರಾ, ಚಂದ್ರಾವತಿ, ಖಜರಾಹೊ ಪ್ರಮುಖವಾದವುಗಳನ್ನು ಹೆಸರಿಸಬಹುದು. ಅಶೋಕನ ಶಾಸನ ಮತ್ತು ಗುಹಾಂತರ ದೇವಾಲಯಗಳ ಮಾಹಿತಿ ಸಂಗ್ರಹ ಈತನ ಕಾರ್ಯ ಸಾಧನೆಗಳಲ್ಲಿ ಒಂದು. ಚೀನಾ ಯಾತ್ರಿಕರ ಸಂಪೂರ್ಣ ಬರವಣಿಗೆಗಳನ್ನು ಆಕರಗಳಾಗಿ ಬಳಸಿಕೊಂಡು 35ಕ್ಕೂ ಹೆಚ್ಚು ಭಾರತದ ಪುರಾತನ ನೆಲೆಗಳನ್ನು ಗುರುತಿಸಿದರು. ಅವುಗಳಲ್ಲಿ ರಾಜಗೀರ್, ನಳಂದಾ, ಕಾಶಿಯಾ, ವೈಶಾಲಿ, ಸಾರನಾಥ, ತಕ್ಷಶಿಲಾ, ಮಣಿಕ್ಯಾಲ, ಅಹಿಚ್ಛತ್ರಾ, ಕೌಶಾಂಬಿ, ಶಂಕಿಷಾ, ಶ್ರಾವಸ್ತಿ ಹೀಗೆ ವಿವಿಧೆಡೆಯಲ್ಲಿ ಉತ್ಖನನ ನಡೆಸಿ ಪುರಾತನ ಬೌದ್ಧ

ಅವಶೇಷಗಳನ್ನು ಹೊರತೆಗೆದರು. ಸತತ 14 ತಿಂಗಳುಗಳ ಕಾಲ ಸಾರನಾಥದಲ್ಲಿ ನಡೆಸಿದ ಉತ್ಖನನ, ಇವರ ಸುದೀರ್ಘ ಕಾಲದ ಉತ್ಖನನವಾಗಿದೆ. ಇಲ್ಲಿ ದೊರೆತ ಧಮೇಖ ಸ್ತೂಪದ ಉತ್ಖನನ, ಮಣಿಕ್ಯಾಲ ಸ್ತೂಪದ ಉತ್ಖನನಗಳು ಮಹತ್ವದ್ದಾಗಿವೆ. ಪುರಾತನ ನೆಲೆಗಳ ನಕ್ಷೆ ಸಿದ್ಧಪಡಿಸಿ, ಅವಶೇಷಗಳನ್ನು ಗುರುತಿಸುವ ಮೂಲಕ ಭಾರತ ಇತಿಹಾಸ ಅಧ್ಯಯನಕ್ಕೆ ವೈಜ್ಞಾನಿಕ ಮಾದರಿ ನೀಡಿದ ಮೊದಲಿಗರು. ಇವುಗಳಲ್ಲಿ ಮಣಿಕ್ಯಾಲ, ಸಾಂಚಿ, ಸಾರನಾಥ, ರಾಜಗೀರ್, ಅಶೋಕನ ಗುಹಾಂತರ ದೇವಾಲಯಗಳು, ತಕ್ಷಶಿಲಾ ಇತ್ಯಾದಿ ನಕ್ಷೆಗಳನ್ನು ಇಲ್ಲಿ ಉಲ್ಲೇಖಿಸಬಹುದು. ಬುಂದೇಲ್‌ಖಂಡ್, ಮಾಳ್ವ, ಮಧ್ಯಪ್ರಾಂತ್ಯ, ಪಂಜಾಬ್, ಬೆಂಗಾಳ್, ಬಿಹಾರ ಪ್ರದೇಶಗಳಲ್ಲಿ ಸಂಚರಿಸಿ, ಪುರಾತನ ನೆಲೆಗಳನ್ನು ಶೋಧಿಸಿದ ಕನ್ನಿಂಗ್‌ಹ್ಯಾಮ್, ಭಾರತದ ಪುರಾತತ್ವ ಸಂಶೋಧನೆಯಲ್ಲಿ ಹೊಸ ಅಧ್ಯಾಯವನ್ನೇ ತೆರೆದರು 1865ರಲ್ಲಿ ಆರ್ಥಿಕ ಮುಗ್ಗಟ್ಟಿನ ಹಿನ್ನಲೆಯಲ್ಲಿ ಸರ್ಕಾರ (1865) ಪುರಾತತ್ವ ಇಲಾಖೆ ಮುಚ್ಚಲು ಮುಂದಾಯಿತು. ಹುದ್ದೆ ತೆರವಿಗೆ ಆದೇಶವೂ ಬಂತು. ಇದರಿಂದ, ಪುರಾತತ್ವ ಸರ್ವೇಕ್ಷಣಾ ಇಲಾಖೆಗೆ ಆ ಮೂಲಕ ಭಾರತೀಯ ಪುರಾತತ್ವ ಅಧ್ಯಯನಕ್ಕೆ ತಾತ್ಕಾಲಿಕ ಹಿನ್ನಡೆಯಾಯಿತು.

**ಪ್ರಥಮ ಮಹಾ-ನಿರ್ದೇಶಕರಾಗಿ ಕನ್ನಿಂಗ್‌ಹ್ಯಾಮ್:**

1860ರಲ್ಲಿ ಜಾಗತಿಕ ಮಟ್ಟದ ಪುರಾತತ್ವ ಅಧ್ಯಯನಗಳಲ್ಲಿ ಹಲವು ಪಲ್ಲಟಗಳಾದವು. ರಾಬರ್ಟ್ ಬ್ರೂಸ್ ಫೂಟ್‌ರು ಮದ್ರಾಸ್ ಬಳಿಯ ಪಲ್ಲವರಮ್‌ನಲ್ಲಿ ಆದಿ-ಶಿಲಾಯುಗದ ಕೈಕೊಡಲಿಗಳನ್ನು ಶೋಧಿಸಿ, ಭಾರತದಲ್ಲಿ ಪ್ರಾಗೈತಿಹಾಸಿಕ ಸಂಶೋಧನೆಗೆ ಅನುವು ಮಾಡಿಕೊಟ್ಟರು. ಇದು ಭಾರತದ ಪ್ರಾಚೀನತೆಯು ಸುಮಾರು ಹಲವು ಲಕ್ಷ ವರ್ಷಗಳಷ್ಟು ಪುರಾತನವೆಂದು ತೋರಿಸಿಕೊಟ್ಟಿತು. ಈ ಮಧ್ಯೆ, ಐರೋಪ್ಯ ಉದ್ದಿಮೆಗಳು ಕೂಡ ಭಾರತದ ಪ್ರಾಚೀನ ಕಾಲದ ಸ್ಮಾರಕಗಳ ವಿವಿಧ ವಿನ್ಯಾಸಗಳಿಗೆ ಮಾರುಹೋಗಿದ್ದವು. ಅವುಗಳ ಪ್ರತಿಗಳಿಗಾಗಿ ಬ್ರಿಟಿಷ್ ಸರ್ಕಾರಕ್ಕೆ ಬೇಡಿಕೆ ಸಲ್ಲಿಸಿದ್ದವು. ಇದರಿಂದ, ಅಂದಿನ ಭಾರತದ ವೈಸರಾಯ್ ಲಾರ್ಡ್ ಮೇಯೋ (1870) ವ್ಯವಸ್ಥಿತ ಮತ್ತು ಪೂರ್ಣಾವಧಿಯ ಪುರಾತತ್ವ ಇಲಾಖೆ ಸ್ಥಾಪನೆಗೆ ಯೋಜನೆ ರೂಪಿಸಲು ಆದೇಶಿಸಿದ. ಭಾರತದ ಸಾಂಸ್ಕೃತಿಕ -ಐತಿಹಾಸಿಕ ಸಮಗ್ರ ಸಂಪತ್ತಿನ ಮಾಹಿತಿ ಸಂಗ್ರಹಣೆಗೆ ಮತ್ತೆ ಕನ್ನಿಂಗ್‌ಹ್ಯಾಮ್‌ರೇ ಇಲಾಖೆಯ ಮಹಾ-ನಿರ್ದೇಶಕರಾಗಿ ನೇಮಕಗೊಂಡರು. ಸುಮಾರು 14 ವರ್ಷಗಳ ಕಾಲ (1885ವರೆಗೆ) ಉತ್ತರ ಭಾರತದ ಬಹು ಭಾಗಗಳಲ್ಲಿ ಪುರಾತತ್ವ ಸರ್ವೇಕ್ಷಣೆ ಕೈಕೊಂಡರು. ತಿಂಗಳಿಗೆ 1 ಸಾವಿರ ರೂ. ವೇತನದ ಮೇಲೆ ಇಬ್ಬರು ಅಧಿಕಾರಿಗಳನ್ನು ಕನ್ನಿಂಗ್‌ಹ್ಯಾಮ್ ಅವರ ಸಹಾಯಕರನ್ನಾಗಿ ಸರ್ಕಾರ ನೇಮಿಸಿತು.

**ಇಲಾಖೆ ವತಿಯಿಂದ ಕೈಗೊಂಡ ಅಧ್ಯಯನಗಳು:**

ಪ್ರಾಚೀನ ಮತ್ತು ಮಧ್ಯಕಾಲೀನ ಅವಶೇಷಗಳ ಅನ್ವೇಷಣೆ ಮತ್ತು ಅವುಗಳ ಸಂರಕ್ಷಣೆಯ ಜವಾಬ್ದಾರಿ ಇಲಾಖೆಗೆ ಸೇರಿತ್ತು. ವಿಶಾಲವಾದ ಭಾರತದ ಸಮಗ್ರ ಪುರಾತತ್ವ ಅವಶೇಷಗಳ ಅನ್ವೇಷಣೆಗಾಗಿ ಪ್ರಾದೇಶಿಕ ನೆಲೆಗಟ್ಟಿನ ಮೇಲೆ ಬೆಂಗಾಲ್, ಬಾಂಬೆ, ಮದ್ರಾಸ್, ಪಂಜಾಬ್ ಮತ್ತು ವಾಯವ್ಯ ಗಡಿ-ಪ್ರಾಂತ್ಯ ಎಂಬ 5 ವಿಭಾಗಗಳನ್ನು ಮಾಡಿ, ಪುರಾತತ್ವ ತಜ್ಞ ಅಧಿಕಾರಿಗಳನ್ನು ನಿರ್ದೇಶಕರನ್ನಾಗಿ ನೇಮಿಸಲು ಸರ್ಕಾರಕ್ಕೆ ಇವರು ಮಾಡಿದ ಮನವಿಯಿಂದಾಗಿ ಸರ್ಕಾರ ಬಾಂಬೆ ವಿಭಾಗವನ್ನು ಸ್ಥಾಪಿಸಿತು.

ಜೇಮ್ಸ್ ಬರ್ಗೆಸ್ ಅವರ ನಿರ್ದೇಶತ್ವದಲ್ಲಿ 1881ರಲ್ಲಿ ದಕ್ಷಿಣ-ಭಾರತದ ವಲಯ ಸ್ಥಾಪನೆಯಾಗುತ್ತದೆ. ಭಾರತದ ವಿಸ್ತಾರ ಮತ್ತು ವೈವಿಧ್ಯತೆ ಬಗ್ಗೆ ಕನ್ನಿಂಗ್‌ಹ್ಯಾಮ್‌ಗೆ ಸಂಪೂರ್ಣ ತಿಳಿವಳಿಕೆ ಇದ್ದುದರಿಂದ ಇಲಾಖೆಯ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಇವರ ದೂರದೃಷ್ಠಿ ಢಾಳಾಗಿ ಕಾಣುತ್ತದೆ.

**ಅನ್ವೇಷಣೆಗಳು:** ಮಹಾ-ನಿರ್ದೇಶಕ ಕನ್ನಿಂಗ್‌ಹ್ಯಾಮ್‌ನಿಗೆ ಸಹಾಯಕರಾಗಿ ಇಬ್ಬರು ಅಧಿಕಾರಿಗಳು ಜೊತೆಯಾದರು. ಈ ಚಿಕ್ಕ ತಂಡ 1871 ರಿಂದ 1885ರವರೆಗೆ ಭಾರತದ ವಾಯವ್ಯ ಗಡಿಯ ಅಫಘಾನಿಸ್ತಾನದಿಂದ ಪೂರ್ವದ ಅಸ್ಸಾಂ ಪ್ರದೇಶದವರೆಗೆ ಮತ್ತು ದಕ್ಷಿಣದಲ್ಲಿ ನರ್ಮದಾ ನದಿಯಿಂದ ಉತ್ತರದ ಕಾಶ್ಮೀರದವರೆಗೆ ಪುರಾತತ್ವ ಅನ್ವೇಷಣೆಗಳನ್ನು ಸತತವಾಗಿ ಕೈಕೊಳ್ಳುವ ಮೂಲಕ ಇತಿಹಾಸ ನಿರ್ಮಿಸಿತು. ಮಥುರಾ, ಭಿಥಾ, ಕಂಕಲಿ-ತಿಲಾ, ಬುದ್ಧಗಯಾ, ರಾಜಗೀರ್, ಕಿಯುಲ್, ಶಹಾಬಾಜ್-ಘರಿ, ಶಹರಿ-ಭಹ್ಲೊಲ್, ರಾಣಿಘಾಟ್, ಜಮಾಲಗರಿ, ತಕ್ಷಶಿಲಾ, ತುಲಂಬಾ, ಮುಲ್ತಾನ, ದೇಪಾಲಪುರ್, ಭಾರ್ಹುತ್, ಚೌಷ್ಠಿ-ಯೊಗೀನಿ, ಕೆಜ್ಜಹರ್, ಬುಂದೇಲ್ಖಂಡ, ಮಾಳ್ವದ ಪ್ರದೇಶಗಳು, ವಿಧಿಶಾ, ಸಾಂಚಿ, ಗಂಗಾನದಿ ಬಯಲು ಪ್ರದೇಶಗಳು, ಶ್ರೀಂಗವೇರಾಪುರ, ಶಂಕಿಷಾ, ತಾಂಡ್ವಾ, ಪಾಟಲಿಪುತ್ರ, ಮಣಿಕ್ಯಾಲ, ಕುರುಕ್ಷೇತ್ರ, ಇತ್ಯಾದಿ ಪುರಾತನ ನೆಲೆಗಳನ್ನು ಉತ್ಖನನ ನಡೆಸಿ ಮಹತ್ವದ ಅವಶೇಷಗಳನ್ನು ಶೋಧಿಸಿತು. ಅವಶೇಷಗಳ ಶೋಧನೆಯ ಜೊತೆಗೆ ಪ್ರಾಚೀನ ರಾಜಮನೆತನಗಳ ಚರಿತ್ರೆಯನ್ನು ವಿಶ್ಲೇಷಿಸುವ ಮತ್ತು ಪುನರ್ ರಚಿಸುವ ಕಾರ್ಯ ಮಾಡಿತು. ಗುಪ್ತರು, ಕಳಚೂರಿಗಳು, ದಕ್ಷಿಣ-ಕೋಸಲಾ ಚರಿತ್ರೆಯನ್ನು ಚರ್ಚಿಸುವ ಮೂಲಕ ಪ್ರಾಚೀನ ಭಾರತದ ರಾಜಕೀಯ ಇತಿಹಾಸದ ವಿವರವಾದ ಮಾಹಿತಿ ನೀಡಿತು. ಮಧ್ಯಕಾಲೀನ ಇತಿಹಾಸದ ಬಗ್ಗೆಯೂ ಬಹಳಷ್ಟು ಅವಶೇಷಗಳನ್ನು ಶೋಧಿಸಿದ ಕನ್ನಿಂಗ್‌ಹ್ಯಾಮ್ ನೇತೃತ್ವದ ತಂಡ ವರದಿ ತಯಾರಿಸಿತು.

**ಕನ್ನಿಂಗ್‌ಹ್ಯಾಮ್ ಶೋಧಿಸಿದ ಪ್ರಮುಖ ನೆಲೆಗಳ ಸಂಕ್ಷಿಪ್ತ ಪರಿಚಯ:**

ಕನ್ನಿಂಗ್‌ಹ್ಯಾಮ್‌ನ ಪ್ರಮುಖ ಶೋಧನೆ ಎಂದರೆ -ಬೌದ್ಧ ಧರ್ಮದ ಪುರಾತನ ಕ್ಷೇತ್ರಗಳು. 1834ರಿಂದ ಬೌದ್ಧ ಸ್ತೂಪ, ವಿಹಾರ, ಶಿಲ್ಪ ಮತ್ತು ಅವಶೇಷಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದ್ದ ಇವರು ಬೌದ್ಧಧರ್ಮವು ಪ್ರಾಚೀನ ಕಾಲದಲ್ಲಿ ಭಾರತದ ನೆರೆಯ ದೇಶಗಳಿಗೂ ಪಸರಿಸಿತ್ತೆಂದು ಅಭಿಪ್ರಾಯಪಟ್ಟರು. ಪ್ರಾಚೀನ ಗ್ರೀಕ್, ರೋಮನ್ ಸಂಸ್ಕೃತಿಗಳಷ್ಟೆ ಪುರಾತನ ಸಂಸ್ಕೃತಿ ಭಾರತದಲ್ಲಿ ಇತ್ತು ಎಂಬುದು ಇವರ ನಂಬಿಕೆಯಾಗಿತ್ತು. ಈ ಹಿನ್ನೆಲೆಯಲ್ಲಿ ಉತ್ತರ ಭಾರತದ ಹಲವು ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಅನೇಕ ಬೌದ್ಧ ನೆಲೆಗಳನ್ನು ಗುರುತಿಸಿದರು. ಪ್ರಮುಖ ನೆಲೆಗಳು ಈ ರೀತಿ ಇವೆ:

**ಬಾರ್ಹುತ್:**

ಮಹಾನಿರ್ದೇಶಕರಾದ ನಂತರ ಇವರು ಶೋಧಿಸಿದ ಬೌದ್ಧ ನೆಲೆಗಳಲ್ಲಿ ಪ್ರಮುಖವಾದುದು ಬಾರ್ಹುತ್. ಇದು ಅಲಹಾಬಾದ್ ಮತ್ತು ಬನಾರಸ್ ನಗರಗಳ ದಕ್ಷಿಣಕ್ಕಿದೆ. ಈ ಗ್ರಾಮವು ಅಂದಿನ ನಗೋಡ ಎಂಬ ಚಿಕ್ಕ ರಾಜಮನೆತನಕ್ಕೆ ಸೇರಿತ್ತು. 1873ರಲ್ಲಿ ಈ ಗ್ರಾಮಕ್ಕೆ ಭೇಟಿ ನೀಡಿ ಪ್ರಾಚೀನ ಬೌದ್ಧ ಸ್ತೂಪದ ಅವಶೇಷಗಳನ್ನು ಶೋಧಿಸಿದರು. ಈ ಸ್ತೂಪವು ಚರಿತ್ರೆ ಆರಂಭ ಕಾಲಕ್ಕೆ ಸೇರಿದ ಶುಂಗರ ಆಶ್ರಯದಲ್ಲಿ ಕಟ್ಟಲಾಗಿತ್ತು. ಹಲವು ಜಾತಕ ಕಥೆಗಳ ಶಿಲ್ಪಗಳು ಹಾಗೂ ವೇದಿಕೆಯ ಮೇಲೆ ಜೋಡಿಸಲಾದ

ವಿವಿಧ ವಿನ್ಯಾಸದ ಕೆತ್ತನೆ ಬಾರ್ಹುತ್ ಸ್ತೂಪದ ಬಹು ವಿಶಿಷ್ಟ ಲಕ್ಷಣಗಳಲ್ಲಿ ಒಂದು. ಈ ಶೋಧನೆ ವಿಶ್ವದ ಗಮನ ಸೆಳೆಯಿತು. ವಿವಿಧ ಪತ್ರಿಕೆಗಳಲ್ಲಿ ಈ ಶೋಧನೆಯ ಬಗ್ಗೆ ವರದಿಗಳು ಪ್ರಕಟಗೊಂಡು ಬ್ರಿಟಿಷರ ಗಮನ ಸೆಳೆಯಿತಲ್ಲದೆ, ಕನ್ನಿಂಗ್‌ಹ್ಯಾಮ್‌ರ ವ್ಯಕ್ತಿತ್ವಕ್ಕೆ ಮೆರುಗು ತಂದಿತು. ಈ ಸ್ತೂಪವನ್ನು ಸಂರಕ್ಷಿಸುವುದಕ್ಕಾಗಿ ಇಡೀ ಸ್ತೂಪದ ಅವಶೇಷಗಳನ್ನು ಕಲ್ಕತ್ತಾದ **ಇಂಡಿಯಾ ಮ್ಯೂಸಿಯಂಗೆ** ಸ್ಥಳಾಂತಸುವ ಕಾರ್ಯ ಮಾಡಿದರು. ಅದರಂತೆ ನಾಶದ ಅಂಚಿನಲ್ಲಿದ್ದ ಇಡಿ ಸ್ತೂಪದ ಅವಶೇಷಗಳನ್ನು ಈ ಮ್ಯೂಸಿಯಂನಲ್ಲಿ ಮರುಜೋಡಿಸಿ ಇರಿಸಲಾಗಿದೆ. ಪ್ರಾಯಶ: ಭಾರತದಲ್ಲಿ ಪ್ರಾಚೀನ ಸ್ಮಾರಕದ ಸಂಪೂರ್ಣ ಅವಶೇಷಗಳನ್ನು ಸ್ಥಳಾಂತರಿಸಿ ವಸ್ತುಸಂಗ್ರಹಾಲಯದಲ್ಲಿರಿಸಿದ ಏಕೈಕ ಉದಾಹರಣೆ ಇದಾಗಿದೆ. ಇದರ ಯಶಸ್ಸಿನ ಕೀರ್ತಿ ಸಲ್ಲಬೇಕಾದ್ದು ಕನ್ನಿಂಗ್‌ಹ್ಯಾಮ್ ಅವರಿಗೆ. ಈ ಸ್ತೂಪದ ಶೋಧನೆ, ಅದರ ಶಿಲ್ಪವೈಭವ ಮತ್ತು ಅವುಗಳನ್ನು ವಸ್ತುಸಂಗ್ರಹಾಲಯಕ್ಕೆ ಸ್ಥಳಾಂತರಿಸಿದ ಕ್ರಮದ ಬಗ್ಗೆ ವಿವರವಾದ ಮಾಹಿತಿಯನ್ನು ತನ್ನ *The Stupa of Bharhut* (1879) ಎಂಬ ಕೃತಿಯಲ್ಲಿ ನೀಡಿದ್ದಾರೆ.

**ಮಾಣಿಕ್ಯಾಲ ಬೌದ್ಧ ನೆಲೆಯ ಅಧ್ಯಯನ:**

ಮಾಣಿಕ್ಯಾಲದ ಬೌದ್ಧ ಸ್ತೂಪದ ಶೋಧನೆ ಮತ್ತು ಅದರ ಉತ್ಖನನ ಕನ್ನಿಂಗ್‌ಹ್ಯಾಮ್ ಕೈಕೊಂಡ ಮತ್ತೊಂದು ಮಹತ್ವದ ಸಂಶೋಧನೆ. ಗೌತಮ ಬುದ್ಧನ ಜೀವನದ ಘಟನೆಯೊಂದರ ಐತಿಹ್ಯಕ್ಕೆ ಸಾಕ್ಷಿಯಾಗಿದೆ. ಒಮ್ಮೆ ಗೌತಮ ಬುದ್ಧನು ಈ ಮಾಣಿಕ್ಯಾಲಕ್ಕೆ ಭೇಟಿ ನೀಡುವ ಸಂದರ್ಭ ಒದಗಿಬರುತ್ತದೆ. ಅಲ್ಲಿಯ ಹಸಿದ ಏಳು ಹುಲಿಗಳು ಬುದ್ಧನ ಮೇಲೆ ಎರಗುತ್ತವೆ. ಆಗ ಗೌತಮ ಬುದ್ಧನು ಹಸಿದ ಹುಲಿಗಳಿಗೆ ತನ್ನನ್ನೆ ಆಹಾರವನ್ನಾಗಿ ಅರ್ಪಿಸುತ್ತಾನೆ. ಬುದ್ಧನ ಮಹಾತ್ಯಾಗದ ಸಂಕೇತವಾಗಿ ಮಣಿಕ್ಯಾಲದಲ್ಲಿ ಸ್ತೂಪವೊಂದನ್ನು ನಿರ್ಮಿಸಲಾಗಿದೆ ಎಂದು, ಹಾಗೂ ಆ ಸ್ತೂಪದಲ್ಲಿ ಹುಲಿಗಳಿಗೆ ಅರ್ಪಿಸಿದ ಗೌತಮನ ದೇಹವಿದೆ ಎಂಬ ನಂಬಿಕೆ ಇದೆ. ಸ್ಥಳದ ಐತಿಹ್ಯ ಹಿನ್ನೆಲೆಯ ಆಧಾರದಿಂದ ಕನ್ನಿಂಗ್‌ಹ್ಯಾಮ್ ಮೂರು ಬಾರಿ ಇಲ್ಲಿ ಸಂಶೋಧನೆ ಕೈಕೊಂಡರು. ಮೊದಲಿಗೆ ಈ ಸ್ಥಳದ ಪ್ರಾಚೀನ ಸ್ಮಾರಕಗಳ ಸಮಗ್ರ ನಕ್ಷೆಯನ್ನು ರಚಿಸಿದರು. ಇಲ್ಲಿಯ ಬೌದ್ಧ ಅವಶೇಷಗಳಾದ ಸ್ತೂಪ, ವಿಹಾರ ಹಾಗೂ ಮತ್ತಿತರ ಸ್ಮಾರಕಗಳನ್ನು ವ್ಯವಸ್ಥಿತವಾಗಿ ಶೋಧಿಸಿ ಅವುಗಳ ಬಗ್ಗೆ ದೀರ್ಘವಾದ ವರದಿಯನ್ನು ರಚಿಸಿದರು. ಇಲ್ಲಿರುವ ಮಹಾಸ್ತೂಪದ ನಿರ್ಮಾಣ ಕಾಲವನ್ನು ಗುರುತಿಸುವುದಕ್ಕಾಗಿ ಒಂದು ಚಿಕ್ಕ ಉತ್ಖನನ ಕೈಕೊಂಡು ಅಲ್ಲಿ ದೊರೆತ ಪ್ರಾಚೀನ ನಾಣ್ಯಗಳನ್ನು ಆಧರಿಸಿ ಸ್ತೂಪದ ಕಾಲವನ್ನು ಗುರುತಿಸಿದ್ದಾರೆ. ಮೊದಲ ಬಾರಿಗೆ ಕನ್ನಿಂಗ್‌ಹ್ಯಾಮ್ ಪುರಾತನ ನೆಲೆಯ ಕಾಲವನ್ನು ಗುರುತಿಸಲು ಉತ್ಖನನದಲ್ಲಿ ಬರುವ ಸ್ತರಗಳನ್ನು ಗಣನೆಗೆ ತೆಗೆದುಕೊಳ್ಳುವ ಪ್ರಯತ್ನ ಮಾಡಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಈ ಮುಂಚಿನ ಯಾವುದೇ ಉತ್ಖನನಗಳಲ್ಲಿ ಕನ್ನಿಂಗ್‌ಹ್ಯಾಮ್ ಉತ್ಖನನಗಳಲ್ಲಿ ಸ್ತರಗಳನ್ನಾಗಲಿ ಅಥವಾ ಅವಶೇಷಗಳ ಜೊತೆಗಿನ ಇನ್ನಿತರ ಸಂಗತಿಗಳನ್ನಾಗಲಿ ಗಣನೆಗೆ ತೆಗೆದು ಕೊಳ್ಳುತ್ತಿರಲಿಲ್ಲ ಎಂಬ ಆರೋಪವಿತ್ತು. ಆದರೆ ಮಾಣಿಕ್ಯಾಲದ ಉತ್ಖನನದಲ್ಲಿ ಸ್ತರಗಳನ್ನು ಗುರುತಿಸುವ ಮತ್ತು ಅವುಗಳಲ್ಲಿ ದೊರಕುವ ನಾಣ್ಯ ಅಥವಾ ಇನ್ನಿತರ ಅವಶೇಷಗಳನ್ನು ಕಾಲ ಗಣನೆಗೆ ಆಕರಗಳನ್ನಾಗಿ ಮಾಡಿಕೊಳ್ಳುವ ಕ್ರಮವನ್ನು ಅನುಸರಿಸಿರುವುದು ವಿಶೇಷ. ಈ ಹಿಂದೆ ಅನೇಕ ವಿದ್ವಾಂಸರು ಮಾಣಿಕ್ಯಾಲವನ್ನು

ತಕ್ಷಶಿಲೆ ಎಂದು ತಪ್ಪಾಗಿ ಗುರುತಿಸಿದ್ದರು. ಆದರೆ ಪ್ರಾಚೀನ ಸಾಹಿತ್ಯ ಮತ್ತು ಬೌದ್ಧ ಅವಶೇಷಗಳನ್ನು ಆಧರಿಸಿ ಮಾಣಿಕ್ಯಾಲ ಪ್ರಾಚೀನ ಪಂಜಾಬಿನ ಬಹುಮುಖ್ಯ ಪುರಾತನ ಕ್ಷೇತ್ರವೆಂದು ತೋರಿಸಿಕೊಟ್ಟರು.

**ತಕ್ಷಶಿಲೆಯ ಶೋಧನೆ, ಅಧ್ಯಯನಗಳು:**

ಕನ್ನಿಂಗ್‌ಹ್ಯಾಮ್‌ರ ಮತ್ತೊಂದು ಸಾಧನೆಯೆಂದರೆ ಪ್ರಾಚೀನ ವಿದ್ಯಾಕೇಂದ್ರ ತಕ್ಷಶಿಲೆಯ ಶೋಧನೆ. ಕೌಟಿಲ್ಯನಂತಹ ಪ್ರಾಚೀನ ಭಾರತದ ವಿದ್ವಾಂಸರು ಹಲವು ಬಾರಿ ಉಲ್ಲೇಖಿಸುವ ತಕ್ಷಶಿಲೆಯ ಸ್ಥಳವನ್ನು 19ನೇ ಶತಮಾನದ ಪೂರ್ವಾರ್ಧದವರೆಗೂ ಗುರುತಿಸಲು ವಿದ್ವಾಂಸರಿಗೆ ಸಾಧ್ಯವಾಗಿರಲಿಲ್ಲ. ಕೆಲವು ಸಂಶೋಧಕರು ಪಂಜಾಬಿನ ಮಾಣಿಕ್ಯಾಲವನ್ನು ಪ್ರಾಚೀನ ಕಾಲದ ತಕ್ಷಶಿಲೆಯೆಂದು ಗುರುತಿಸಿದ್ದರು. ಆದರೆ ಕನ್ನಿಂಗ್‌ಹ್ಯಾಮ್‌ರು ಹೊಂದಿದ್ದ ಅಪಾರವಾದ ಪ್ರಾಚೀನ ಭೌಗೋಳಿಕತೆ ಜ್ಞಾನದ ಹಿನ್ನೆಲೆಯಲ್ಲಿ ಚೀನಾ ಯಾತ್ರಿಕರ ಬರಹಗಳನ್ನು ಆಧರಿಸಿ 1863ರಲ್ಲಿ ಪುರಾತನ ತಕ್ಷಶಿಲೆಯ ಸ್ಥಳವನ್ನು ಶೋಧಿಸಿದರು. ಪಂಜಾಬ್ ಪ್ರಾಂತ್ಯಕ್ಕೆ ಸೇರಿದ **'ಶಹಾ-ಧರಿ'** ಎಂಬ ಸ್ಥಳವೇ ಪ್ರಾಚೀನ ತಕ್ಷಶಿಲೆ ಎಂಬುದನ್ನು ಖಚಿತ ಪಡಿಸಿದರು. ಇಲ್ಲಿ ಪ್ರಾಚೀನ ಬೌದ್ಧ ನೆಲೆಯ ಅವಶೇಷಗಳು ಹಾಗೂ ಪುರಾತನ ಗ್ರೀಕ್ ಸಂಸ್ಕೃತಿಯ ಕುರುಹುಗಳನ್ನು ನಿಖರವಾಗಿ ಗುರುತಿಸಿ ವರದಿ ಸಲ್ಲಿಸಿದರು. ಕನ್ನಿಂಗ್‌ಹ್ಯಾಮ್ 1863ರಲ್ಲಿ ರಚಿಸಿದ ತಕ್ಷಶಿಲೆಯ ನೆಲೆಯ ನಕ್ಷೆ ಅತ್ಯಂತ ವೈಜ್ಞಾನಿಕವಾದುದೆಂದು ಪುರಾತತ್ವಜ್ಞ ಜಾನ್ ಮಾರ್ಷಲ್ ಕೊಂಡಾಡಿದ್ದಾರೆ. ತಕ್ಷಶಿಲೆಯು ಪ್ರಾಚೀನ ಕಾಲದ ಗಾಂಧಾರ ದೇಶದ ರಾಜಧಾನಿ ಮತ್ತು ಪ್ರಾಚೀನ ವಿದ್ಯಾಕೇಂದ್ರವೂ ಆಗಿತ್ತು. ಗ್ರೀಕರು ಮತ್ತು ಇಂಡೋ-ಬ್ಯಾಕ್ಟ್ರೀಯನ್ನ್‌ರು ಇಲ್ಲಿ ನಗರಗಳನ್ನು ನಿರ್ಮಿಸಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದ್ದರೆಂದು ಪ್ರಾಚೀನ ಕಾಲದ ಸಾಹಿತ್ಯಗಳಿಂದ ತಿಳಿದುಬರುತ್ತದೆ. ಬಹು ಉಲ್ಲೇಖಿತವಾದ ಈ ತಕ್ಷಶಿಲೆಯ ಶೋಧನೆ ಕನ್ನಿಂಗ್‌ಹ್ಯಾಮ್‌ರಿಗೆ ಕೀರ್ತಿಯನ್ನು ತಂದುಕೊಟ್ಟಿತು. ಪ್ರಾಚೀನ ಸಾಹಿತ್ಯದ ಉಲ್ಲೇಖಗಳನ್ನು ಆಧರಿಸಿದ ಸಂಶೋಧನೆಗಳನ್ನು ಪುರಾತತ್ವ ಅವಶೇಷಗಳ ಮೂಲಕ ಖಚಿತ ಪಡಿಸಿದ ಕನ್ನಿಂಗ್‌ಹ್ಯಾಮ್‌ರ ಸಾಧನೆ ಉಲ್ಲೇಖನಾರ್ಹವಾದುದು.

**ಬುದ್ಧಗಯಾ ಅಧ್ಯಯನ:**

ಸೈನ್ಯದ ಬೌದ್ಧ ಧರ್ಮದ ಪವಿತ್ರ ಕ್ಷೇತ್ರವೆನಿಸಿದ ಬುದ್ಧಗಯಾ ನೆಲೆಯ ಬಗ್ಗೆ ಕನ್ನಿಂಗ್‌ಹ್ಯಾಮ್ ಸಾಕಷ್ಟು ಅಧ್ಯಯನಗಳನ್ನು ಕೈಕೊಂಡಿದ್ದಾರೆ. ಈ ಹಿಂದೆ ವಿದ್ವಾಂಸರು ಇಲ್ಲಿಯ ದೇವಾಲಯದ ವಾಸ್ತುರಚನೆಯನ್ನು ಆಧರಿಸಿ ಇದರ ನಿರ್ಮಾಣದ ಕಾಲವನ್ನು ಗುರುತಿಸಲು ಪ್ರಯತ್ನಿಸಿದ್ದರು. 1861ರಲ್ಲಿ ಕನ್ನಿಂಗ್‌ಹ್ಯಾಮ್ ಈ ಸ್ಥಳಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಒಂದು ಶಾಸನ ಶೋಧಿಸಿ ಅದರ ಆಧಾರದಿಂದ ಕ್ರಿ. ಶ. 500ರ ಅವಧಿಯಲ್ಲಿ ಈ ದೇವಾಲಯ ನಿರ್ಮಾಣವಾಗಿದೆ ಎಂಬುದುದಾಗಿ ಗುರುತಿಸಿದರು. ಆದರೆ ಆ ಶಾಸನ ಒಂದು ಕೂಟ-ಶಾಸನವಾಗಿತ್ತು. 1880ರ ದಶಕದಲ್ಲಿ ಮತ್ತೆ ಈ ದೇವಾಯಲದ ಒಳಾಂಗಣದಲ್ಲಿ ಒಂದು ಚಿಕ್ಕ ಉತ್ಖನನ ಕೈಕೊಳ್ಳುತ್ತಾರೆ. ಆ ವೇಳೆಯಲ್ಲಿ ಕ್ರಿ.ಶ. 2ನೇ ಶತಮಾನದ ಪುರಾತನ ಅವಶೇಷಗಳನ್ನು ಪತ್ತೆಹಚ್ಚುತ್ತಾರೆ. ಇವುಗಳ ಆಧಾರದಿಂದ ಈ ದೇವಾಲಯದ ಕಾಲವನ್ನು ಕ್ರಿ. ಶ. 2ನೇ ಶತಮಾನವೆಂದು ಮತ್ತು ಇದನ್ನು ಅಶೋಕ ಚಕ್ರವರ್ತಿ ನಿರ್ಮಿಸಿದ್ದ ಹಳೆಯ ನಿರ್ಮಾಣದ ಮೇಲೆಯೇ ಕ್ರಿ.ಶ. 2ನೇ

ಶಂಕಿಪ ಬೌದ್ಧ ನೆಲೆಯಲ್ಲಿ ದೊರೆತ ಅಶೋಕನ ಸ್ತಂಭ



ಬಾರ್ಹುತ್ ಸ್ತೂಪದಲ್ಲಿ ದೊರೆತ ಬೋಧಿಸತ್ವ ಶಿಲ್ಪ

ಶತಮಾನದಲ್ಲಿ ಕುಷಾಣ ಅರಸರಿಂದ ಪುನರ್ ನಿರ್ಮಾಣವಾಗಿತ್ತೆಂದು ವಿಶ್ಲೇಷಿಸಿದರು. ಆದರೆ ಈ ದೇವಾಲಯವು ಹ್ಯೂಯೆನ್‌ತ್ಸಾಂಗ್ ಭೇಟಿ ನೀಡುವ ಹೊತ್ತಿಗೆ ಸಂಪೂರ್ಣವಾಗಿ ಶಿಥಿಲಗೊಂಡಿತ್ತು. ಆ ಕಾರಣಕ್ಕಾಗಿ ಹ್ಯೂಯೆನ್‌ತ್ಸಾಂಗ್ ಈ ದೇವಾಲಯದ ಬಗ್ಗೆ ಉಲ್ಲೇಖ ಮಾಡಿಲ್ಲ ಎಂದು ವ್ಯಾಖ್ಯಾನಿಸಿದರು. ಒಟ್ಟಿನಲ್ಲಿ ಕನ್ನಿಂಗ್‌ಹ್ಯಾಮ್ ಸಂಶೋಧನೆಯನ್ನು ವಸ್ತುನಿಷ್ಠ ಹಾಗೂ ಖಚಿತ ಮಾಹಿತಿಗಳ ಆಧಾರಗಳಿಂದ ಕೈಕೊಳ್ಳುವುದನ್ನು ಕರಗತ ಮಾಡಿಕೊಂಡಿದ್ದರು.

**ಸಾಂಚಿಯ ಬೌದ್ಧ ಸ್ತೂಪಗಳ ಅಧ್ಯಯನ:**

ಸೈನ್ಯದ ಸೇವೆಯಲ್ಲಿದ್ದಾಗಲೇ ಕನ್ನಿಂಗ್‌ಹ್ಯಾಮ್‌ರು ಸಾಂಚಿ ಪರಿಸರದ ಬೌದ್ಧ ಸ್ತೂಪಗಳ ಅನ್ವೇಷಣೆ ಮಾಡುತ್ತಾರೆ. 1850ರ ದಶಕದಲ್ಲಿ ಬ್ರಿಟಿಷ್ ಸರ್ಕಾರ ಭಿಲ್ಸಾ ಆಡಳಿತ ವಿಭಾಗಕ್ಕೆ ಸೇರಿದ ಸಾಂಚಿ ಪರಿಸರದ ಪ್ರಾಚೀನ ಬೌದ್ಧ ಸ್ತೂಪಗಳ ಸರ್ವೆ ಮಾಡುವಂತೆ ಕ್ಯಾಪ್ಟನ್ ಎಫ್. ಸಿ. ಮ್ಯಾಸ್ಸೇ ಮತ್ತು ಕನ್ನಿಂಗ್‌ಹ್ಯಾಮ್‌ನನ್ನು ನಿಯೋಜಿಸಿತು. 1851ರಲ್ಲಿ ಇವರಿಬ್ಬರು ಅಧ್ಯಯನ ಕೈಗೊಂಡು ಬೌದ್ಧ ಸ್ತೂಪಗಳ ಶೋಧನೆ ಹಾಗೂ ಹಳೆಯ ಅವಶೇಷಗಳನ್ನು ಪತ್ತೆಹಚ್ಚಿದರು. ಈ ಶೋಧನೆ ಆಧರಿಸಿ 1854ರಲ್ಲಿ *The Bhilsa Topes or Buddhist Monuments of Central India...* ಎಂಬ ಕೃತಿಯನ್ನು ಕನ್ನಿಂಗ್‌ಹ್ಯಾಮ್ ಪ್ರಕಟಿಸಿದರು. ಫಾಹಿಯಾನ್ ಉಲ್ಲೇಖಿಸುವ **'ಶ-ಚಿಹ'** ಸ್ಥಳವನ್ನು ಕನ್ನಿಂಗ್‌ಹ್ಯಾಮ್ ಸಾಂಚಿಯೆಂದು ಗುರುತಿಸುವ ಮೂಲಕ ಸಾಂಚಿಯ ಇತಿಹಾಸದ ಮೇಲೆ ಮೊಟ್ಟಮೊದಲು ಬೆಳಕು ಚೆಲ್ಲಿದರು. ಸ್ತೂಪಗಳ ರಚನೆ ತಿಳಿಯಲು ಉತ್ಖನನ ನಡೆಸಿ, ಅವುಗಳ ನಕ್ಷೆ, ಶಾಸನಗಳು ಹಾಗೂ ಅವಶೇಷಗಳನ್ನು ದಾಖಲಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಸಾಂಚಿಯ ಈ ಅನ್ವೇಷಣೆಗಳು ಕನ್ನಿಂಗ್‌ಹ್ಯಾಮರ ಆರಂಭಿಕ ಶೋಧನೆಗಳಾಗಿದ್ದು, ಪುರಾತತ್ವ ಅಧ್ಯಯನಗಳಿಗೆ ಪ್ರಮುಖ ದಾಖಲೆಗಳೆನಿಸಿವೆ. ಈ ಕೃತಿಯಲ್ಲಿ ಪ್ರಾಚೀನ ಸ್ತೂಪಗಳ ನಕ್ಷೆ, ರೇಖಾಚಿತ್ರದೊಂದಿಗೆ ಅಪೂರ್ವ ಮಾಹಿತಿಗಳಿವೆ. ಈಗ ಮೂಲ ರಚನೆಯಲ್ಲಿ ಮಾರ್ಪಾಡು ಅಥವಾ ಕೆಲವು ನಾಶವಾಗಿದ್ದು, ಅಧ್ಯಯನಕ್ಕೆ ಉಳಿದಿರುವುದು ಕನ್ನಿಂಗ್‌ಹ್ಯಾಮ್‌ರು ಶೋಧಿಸಿ, ಸಂಗ್ರಹಿಸಿ ದಾಖಲಿಸಿದ ದಾಖಲೆಗಳು ಮಾತ್ರ.

**ಶಂಕೀಸಾದ ಶೋಧನೆಗಳು:**

ಚೀನಾ ಯಾತ್ರಿಕ ಹೂಯೆನ್‌ತ್ಸಾಂಗ್‌ನ ಬರಹಗಳನ್ನು ಆಧರಿಸಿ ಗುರುತಿಸಿದ ಮೊದಲ ಬೌದ್ಧ ಸ್ಥಳ ಇದಾಗಿದೆ. ಇಂದಿನ ಉತ್ತರ ಪ್ರದೇಶದ ಫರುಕಾಬಾದ ಜಿಲ್ಲೆಯಲ್ಲಿದ್ದು ಬಹಳ ಮಹತ್ವದ ಬೌದ್ಧ ಅವಶೇಷಗಳನ್ನು ಹೊಂದಿದ ಸ್ಥಳವಾಗಿದೆ. ಕನ್ನಿಂಗ್‌ಹ್ಯಾಮ್ ಈ ಸ್ಥಳದ ಅಧ್ಯಯನಕ್ಕೆ ಬೇರೆ ಬೇರೆ ಸಂದರ್ಭದಲ್ಲಿ ಸುಮಾರು ನಾಲ್ಕು ಬಾರಿ ಅನ್ವೇಷಣೆ ಕೈಕೊಂಡಿದ್ದಾರೆ. ಮೊದಲ ಬಾರಿಗೆ 1840ರಲ್ಲಿ ಭೇಟಿ ನೀಡಿದ ಸಂದರ್ಭದಲ್ಲಿ ಹೂಯೆನ್‌ತ್ಸಾಂಗ್ ಉಲ್ಲೇಖಿಸುವ **'ಶೆಂಗ್-ಕಿ-ಷಿ'** ನಗರವನ್ನು ಶಂಕೀಸಾ ಸ್ಥಳವೆಂಬುದನ್ನು ದೊರೆತ ಪ್ರಾಚೀನ ಅವಶೇಷಗಳನ್ನು ಆಧರಿಸಿ ವಿವರಿಸುತ್ತಾನೆ. ಇದು ಜಾಗತೀಕ ಮಟ್ಟದಲ್ಲಿ ಗಮನ ಸೆಳೆಯುತ್ತದೆ. ಪುರಾತತ್ವ ಇಲಾಖೆಯ ಮುಖ್ಯಸ್ಥನಾದ ಸಂದರ್ಭದಲ್ಲಿಯೂ

ಮೂರು ಬಾರಿ ಸಂಶೋಧನೆಗೆ ಇಲ್ಲಿಗೆ ಭೇಟಿ ನೀಡುತ್ತಾರೆ. 1876ರಲ್ಲಿ ಒಂದು ಚಿಕ್ಕ ಉತ್ಖನನವನ್ನು ಕೈಕೊಳ್ಳುತ್ತಾರೆ. ಈ ಉತ್ಖನನದಲ್ಲಿ ಪ್ರಾಚೀನ ಕಾಲದ ಅಶೋಕನ ಸ್ಥಂಭವನ್ನು ಪತ್ತೆ ಹಚ್ಚುತ್ತಾರೆ. ಶಂಕೀಷಾ ಕನ್ನಿಂಗ್‌ಹ್ಯಾಮ್‌ನಿಗೆ ತುಂಬಾ ಹತ್ತಿರದ ಸಂಶೋಧನಾ ಕ್ಷೇತ್ರವಾಗಿತ್ತು.

**ಕೈ ತಪ್ಪಿದ ಹರಪ್ಪಾ ಸಂಸ್ಕೃತಿಯ ಶೋಧನಾ ಕೀರ್ತಿ:**

ಕನ್ನಿಂಗ್ಯಹ್ಯಾಮ್‌ರ ಬಹು ದೊಡ್ಡ ವಿಫಲತೆ ಎಂದರೆ ಹರಪ್ಪಾ ಸಂಸ್ಕೃತಿಯ ಅವಶೇಷಗಳನ್ನು ಗುರುತಿಸದೇ ಹೋಗಿದ್ದು. 1853ರಲ್ಲಿಯೇ ಇವರು ಹರಪ್ಪಾ ಸ್ಥಳಕ್ಕೆ ಭೇಟಿ ನೀಡಿದ್ದರು. ಅಲ್ಲಿಯ ಪುರಾತನ ಅವಶೇಷದ ದಿಣ್ಣೆಗಳನ್ನು ಗುರುತಿಸಿದ್ದರು. 1856ರಲ್ಲಿ ಮತ್ತೊಮ್ಮೆ ಭೇಟಿ ನೀಡಿದಾಗಲೂ ಈ ಅವಶೇಷಗಳು ಸುರಕ್ಷಿತವಾಗಿರುವುದನ್ನು ಸಹ ಗಮನಿಸುತ್ತಾರೆ. 1772-73ರ ಅವಧಿಯಲ್ಲಿ 3ನೇ ಬಾರಿ ಭೇಟಿ ನೀಡಿದಾಗಲೂ, ಹರಪ್ಪಾ ನೆಲೆಯ ಅನೇಕ ಇಟ್ಟಿಗೆಗಳನ್ನು ರೈಲ್ವೆ ಮಾರ್ಗಕ್ಕೆ ಬಳಸುತ್ತಿರುವುದನ್ನು ಕಾಣುತ್ತಾರೆ. ಪ್ರಾಚೀನ ಚೀನಾ ಯಾತ್ರಿಕ ಹ್ಯೂಯೆನ್‌ತ್ಸಾಂಗ್‌ನ ಬರಹದಲ್ಲಿ ಉಲ್ಲೇಖವಾಗುವ ಪೊ-ಫಾ-ತೊ ಅಥವಾ ಪೊ-ಫಾ-ಲೊ ಸ್ಥಳವೇ ಈ ಹರಪ್ಪಾ ನೆಲೆ ಎಂದು ನಂಬಿರುತ್ತಾರೆ. ತಾನು ಶೋಧಿಸಿದ ಅಸಂಖ್ಯ ಪುರಾತನ ನಾಣ್ಯಗಳನ್ನು ಆಧರಿಸಿ, ಈ ನೆಲೆ ಪುರಾತನ ಬೌದ್ಧ ಕ್ಷೇತ್ರ ಎಂಬ ತೀರ್ಮಾನಕ್ಕೆ ಬರುತ್ತಾರೆ. ಚಿಕ್ಕ ಉತ್ಖನನವನ್ನೂ ಕೈಗೊಂಡು ಶಿಲಾ ಆಯುಧಗಳು, ಮಡಕೆ ಚೂರುಗಳು, ಹಸುವಿನ ಚಿತ್ರ ಇರುವ ಒಂದು ಮುದ್ರೆಯನ್ನು ಶೋಧಿಸುತ್ತಾರೆ. ಆದರೆ, ಅವುಗಳ ಪ್ರಾಚೀನತೆ ಮತ್ತು ಸಿಂಧೂ ನದಿ ಸಂಸ್ಕೃತಿಯ ಕುರುಹುಗಳನ್ನು ಗುರುತಿಸಲು ವಿಫಲರಾಗುತ್ತಾರೆ. ದೊರೆತ ಮುದ್ರೆಯಲ್ಲಿಯ ಹರಪ್ಪಾ ಲಿಪಿ ಮತ್ತು ಹಸುವಿನ ಚಿತ್ರಗಳನ್ನು ಗಮನಿಸಿದ ಕನ್ನಿಂಗ್‌ಹ್ಯಾಮ್, ಈ ಮುದ್ರೆಯ ಮೂಲ ಭಾರತದ್ದು ಅಲ್ಲ ಎಂಬ ಅಭಿಪ್ರಾಯ ತಳೆಯುತ್ತಾರೆ. ಏಕೆಂದರೆ, ಅಲ್ಲಿಯ ಹಸುವಿನ ಚಿತ್ರವು ವಿದೇಶಿ ಮೂಲದ್ದು ಎಂದು ನಂಬಿದ್ದೇ ಕಾರಣ. ಇಲ್ಲಿಯ ಲಿಪಿಯನ್ನು ಸಹ ಗುರುತಿಸುವಲ್ಲಿ ಇವರಿಗೆ ಸಾಧ್ಯವಾಗಲಿಲ್ಲ. ಸುಮಾರು ಆರು ಸಾವಿರ ವರ್ಷಗಳಷ್ಟು ಪುರಾತನವಾದ ಹರಪ್ಪಾ ಸಂಸ್ಕೃತಿಯು ಇವರ ಅಧ್ಯಯನದಿಂದ ದೂರವೇ ಉಳಿಯಿತು.

**ಶಾಸನ ಶಾಸ್ತ್ರದ ಅಭಿವೃದ್ಧಿ ಹಾಗೂ ಪ್ರಕಟಣೆಗಳಿಗೆ ಆದ್ಯತೆ:**

ಭಾರತದಲ್ಲಿ ಕಾಲಿನ್ ಮೆಕೆಂಜಿಯವರಿಂದ ಶಾಸನ ಸಂಗ್ರಹದ ವ್ಯವಸ್ಥಿತ ಪ್ರಯತ್ನ ಆರಂಭವಾಯಿತು. ಆ ನಂತರ ಬಂದ ಜೇಮ್ಸ್ ಪ್ರಿನ್ಸೆಫ್, ಟರ್ನರ್, ಫ್ಲೀಟ್ ಮುಂತಾದವರು ಶಾಸನಗಳ ಶೋಧನೆ ಹಾಗೂ ಸಂಪಾದನೆಗೆ ಹೆಚ್ಚು ಮಹತ್ವ ಕೊಟ್ಟು ಭಾರತದಲ್ಲಿ ಪ್ರಾಚೀನ ಶಾಸನಗಳ ಅಧ್ಯಯನಕ್ಕೆ ಹೊಸ ಮಾರ್ಗವನ್ನು ಕಲ್ಪಿಸಿಕೊಟ್ಟರು. ಅದರಲ್ಲಿಯೂ ಮುಖ್ಯವಾಗಿ ಅಶೋಕ ಚಕ್ರವರ್ತಿಯ ಬ್ರಾಹ್ಮಿ ಶಾಸನಗಳ ಶೋಧನೆಗಳು ವಿದ್ವಾಂಸರಲ್ಲಿ ಉತ್ಸಾಹವನ್ನು ಇಮ್ಮಡಿಸುವಂತೆ ಮಾಡಿದವು. ಕನ್ನಿಂಗ್‌ಹ್ಯಾಮ್ ಕೂಡ ತನ್ನ 50 ವರ್ಷಗಳ ಅಧ್ಯಯನಗಳಲ್ಲಿ ಶಾಸನ ಶಾಸ್ತ್ರಕ್ಕೆ ಹೆಚ್ಚಿನ ಆದ್ಯತೆ ನೀಡಿದರು. ಬೌದ್ಧ ಧರ್ಮದ ಚರಿತ್ರೆಯ ಶೋಧನೆಯನ್ನು ತನ್ನ ಅಧ್ಯಯನ ಪ್ರಧಾನ ವಿಷಯ ಮಾಡಿಕೊಂಡಿದ್ದ ಕನ್ನಿಂಗ್‌ಹ್ಯಾಮ್ ನಿರಂತರವಾಗಿ ಅಶೋಕನ ಶಾಸನಗಳ ಸಂಶೋಧನೆಗೆ ಒತ್ತು ನೀಡಿದ್ದರು. ಅಶೋಕನ ಎಲ್ಲಾ ಶಿಲಾಶಾಸನಗಳನ್ನು ಸಂಗ್ರಹಿಸಿ ಅವುಗಳನ್ನು ವ್ಯವಸ್ಥಿತವಾಗಿ ಸಂಪಾದಿಸುವ ಯೋಜನೆ

ಮೊದಲಿನಿಂದಲೂ ರೂಪಿಸಿಕೊಂಡಿದ್ದರು. ಪುರಾತತ್ವ ಇಲಾಖೆಯ ಮಹಾನಿರ್ದೇಶಕರಾದ ನಂತರ ಇದನ್ನು ಜಾರಿಗೆ ತರುವುದಕ್ಕೆ ಪ್ರಯತ್ನಿಸಿ ಯಶಸ್ವಿಯಾದರು. ಇದರ ಅಂಗವಾಗಿ *Corpus Inscriptionum Indicarum* ಎಂಬ ಶಾಸನ ಸಂಪುಟಗಳ ಸಂಪಾದನೆ ಹಾಗೂ ಪ್ರಕಟಣೆ ಕೈಕೊಂಡರು. ಇದರ ಮೊದಲ ಸಂಪುಟವಾಗಿ ಅಶೋಕನ ಶಿಲಾ ಶಾಸನಗಳನ್ನು 1877ರಲ್ಲಿ ಪ್ರಕಟಿಸುತ್ತಾರೆ. ಜೆ.ಎಫ್. ಫ್ಲೀಟ್ ಅವರಿಗೆ ಗುಪ್ತ ರಾಜಮನೆತನದ ಶಾಸನಗಳನ್ನು ಸಂಪಾದಿಸುವುದಕ್ಕೆ ಕೇಳಿಕೊಳ್ಳುತ್ತಾರೆ. ಅದರಂತೆ ಮೂರನೆಯ ಸಂಪುಟವು ಇದೇ ಮಾಲಿಕೆಯಲ್ಲಿ ಪ್ರಕಟಿಸುತ್ತಾರೆ. ಶಾಸನಗಳ ಸಂಗ್ರಹ ಮತ್ತು ಸಂಪಾದನೆಯು ಪುರಾತತ್ವ ಇಲಾಖೆಯ ಬಹು ಮುಖ್ಯ ಕರ್ತವ್ಯವಾಗಿ ಬೆಳೆಯತೊಡಗಿತು. ನಂತರ ಇಲಾಖೆಯ ವತಿಯಿಂದ ಎಪಿಗ್ರಾಫಿಯಾ ಇಂಡಿಕಾ ಎಂಬ ನಿಯತಕಾಲಿಕೆ ಪತ್ರಿಕೆಯನ್ನು ಪ್ರಕಟಿಸುವ ಹಂತಕ್ಕೆ ಬೆಳೆಯಿತು. ಈ ನಿಯತಕಾಲಿಕ ಇಂದಿಗೂ ಪ್ರಕಟವಾಗುತ್ತಿದೆ.

**ಕನ್ನಿಂಗ್‌ಹ್ಯಾಮ್‌ರ ಬರಹಗಳು:**

ಕನ್ನಿಂಗ್‌ಹ್ಯಾಮ್‌ರ ಬರವಣಿಗೆಗಳು ವಿದ್ವಾಂಸರಲ್ಲಿ ಅಚ್ಚರಿ ಮೂಡಿಸಿದೆ. ಭಾರತಕ್ಕೆ ತನ್ನ 19ನೇ ವಯಸ್ಸಿನಲ್ಲಿ ಬಂದ ಮರುವರ್ಷವೇ ಭಾರತದಲ್ಲಿ ದೊರೆತ ಹಳೆಯ ಅಪರೂಪದ ರೋಮನ್ ನಾಣ್ಯಗಳ ಕುರಿತಾಗಿ ಲೇಖನ ಪ್ರಕಟಿಸುವ ಮೂಲಕ ಇವರ ಬರವಣಿಗೆಗಳು ಪ್ರಾರಂಭಗೊಳ್ಳುತ್ತವೆ. ಇವರು ಸುಮಾರು 45ಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಹೆಚ್ಚಿನವು ನಾಣ್ಯ ಶಾಸ್ತ್ರದ ಅಧ್ಯಯನಕ್ಕೆ ಸಂಬಂಧಿಸಿದ್ದು, ಉಳಿದವುಗಳು ಚರಿತ್ರೆ, ಪುರಾತತ್ವ, ಶಾಸನ ಹಾಗೂ ಭೌಗೋಳಿಕತೆಯ ವಿಷಯಗಳಿಗೆ ಸಂಬಂಧಿಸಿವೆ. ಇವರ ಲೇಖನಗಳಿಗಿಂತಲೂ ಇವರ ಗ್ರಂಥಗಳು ಇವರಿಗೆ ಹೆಸರನ್ನು ತಂದುಕೊಟ್ಟಿವೆ. ಇವರು ಪ್ರಕಟಿಸಿದ ಈ ಕೆಳಗಿನ 10ಕ್ಕೂ ಹೆಚ್ಚಿನ ಗ್ರಂಥಗಳು ಇಂದಿಗೂ ಮೂಲ ಆಕರಗಳಾಗಿವೆ.

- *An Essay on the Arian Order of Architecture, as Exhibited in the Temples* of *Kashmir* (1848).
- *A Few Notes and Experiments on the Stone and Timber of the Gwalior Territory – Showing their values as Building Materials* (1853)
- *Ladak, Physical Statistical and Historical with Notes of the Surrounding Countries* (1854)
- *Bhilsa Topes or Buddhst Monuments of Central India ….* (1854)
- *Ancient Geography of India-I Buddhist Period, Including the Campaigns of Alexander and Travels of Hwen-Thang* (1871)
- *Inscriptions of Asoka- Corpus Inscriptionum Indicarum Volume-I* (1877)
- *The Stupa of Bharhut* (1879)
- *The Book on Indian Eras* (1883)

- *Coins of Ancient India: From the Earliest Times Down to the 17th Century* (1891)
- *Mahabodhi or the Great Buddhist Temple under the Bodhi Tree at Buddha-Gaya* (1892)
- *Coins of the Medieval India from 7th Century Down to the Myhammadan Conquests* (1894)
- *Four Reports Made during the Years 1862-63 to 1864-65.* (1871).

ಈ ಎಲ್ಲ ಗ್ರಂಥಗಳು ಹಾಗೂ ಲೇಖನಗಳನ್ನು ಹೊರತುಪಡಿಸಿ ಇವರು ಪುರಾತತ್ವ ಇಲಾಖೆಯ ವತಿಯಿಂದ 1861ರಿಂದ 1885ರವರೆಗೆ ಕೈಕೊಂಡ ಪುರಾತತ್ವ ಅನ್ವೇಷಣೆಗಳನ್ನು 23 ಸಂಪುಟಗಳಲ್ಲಿ ವಾರ್ಷಿಕ ವರದಿಗಳ ರೂಪದಲ್ಲಿ ಪ್ರಕಟಿಸಿದ್ದಾರೆ. ಇವು "ಕನ್ನಿಂಗ್‌ಹ್ಯಾಮ್‌ರ ವಾರ್ಷಿಕ ವರದಿಗಳು" ಎಂದು ಇಂದಿಗೂ ಕರೆಯಲ್ಪಡುತ್ತಿದ್ದು, ಇವು ಉತ್ತರ ಭಾರತದ ಪ್ರಾಚೀನ ಅವಶೇಷಗಳ ಮಾಹಿತಿ ಕೋಶದಂತಿವೆ.

**ಉಪಸಂಹಾರ:**

ಸುಮಾರು 50ವರ್ಷಗಳ (1834–1885) ಸುದೀರ್ಘಕಾಲ ಭಾರತದ ವಿವಿಧ ಪರಿಸರಗಳ ಪುರಾತತ್ವ ಅವಶೇಷಗಳನ್ನು ಶೋಧಿಸಿ, ಅವುಗಳ ಸಹಾಯದಿಂದ ಚರಿತ್ರೆಯನ್ನು ಕಟ್ಟುವ ಪ್ರಯತ್ನ ಮಾಡಿದ ಕನ್ನಿಂಗ್‌ಹ್ಯಾಮ್‌ರ ಸಾಧನೆಗಳು ಅತ್ಯಂತ ಶ್ಲಾಘನೀಯ. ಹವಾಮಾನದ ವೈಪರೀತ್ಯಗಳ ನಡುವೆಯೂ ಹಲವು ಸಾವಿರ ಮೈಲಿಗಳನ್ನು ಸಂಚರಿಸಿ ಶಾಸನ, ಶಿಲ್ಪಕಲೆ, ನಾಣ್ಯಗಳು ಮತ್ತು ಪುರಾತನ ಅವಶೇಷಗಳನ್ನು ಶೋಧಿಸಿ, ಅವುಗಳ ವಿವರಗಳ ವರದಿಗಳನ್ನು ರಚಿಸಿ ಪ್ರಕಟಿಸುವ ಮೂಲಕ ಇಂದು ಕನ್ನಿಂಗ್‌ಹ್ಯಾಮ್ ನಮಗೆ ಚಿರಸ್ಮರಣೀಯರಾಗಿದ್ದಾರೆ. ಬೌದ್ಧ ಧರ್ಮದ ಚರಿತ್ರೆ ಹಾಗೂ ಅದರ ಬೆಳವಣಿಗೆಯನ್ನು ಗುರುತಿಸುವುದಕ್ಕೆ ಇವರು ಹೆಚ್ಚಿನ ಆದ್ಯತೆಯನ್ನು ಕೊಟ್ಟರು. ಪ್ರಾಚೀನ ಚೀನಾ ಯಾತ್ರಿಕರ ಬರಹಗಳನ್ನು ಬಳಸಿಕೊಂಡು ನಡೆಸಿದ ಸಂಶೋಧನೆ ಆ ಕಾಲದ ವಿದ್ವಾಂಸರಿಗೆ ಒಂದು ಮಾರ್ಗದರ್ಶನವಾಗಿತ್ತು. ಸರ್ಕಾರದ ವತಿಯಿಂದ ಪುರಾತತ್ವ ಇಲಾಖೆ ಸ್ಥಾಪಿಸುವಲ್ಲಿ ಇವರು ವಹಿಸಿದ ಪಾತ್ರ ಮಹತ್ವದ್ದು. ಹೊಸದಾಗಿ ಸ್ಥಾಪಿತವಾದ ಕೇಂದ್ರ ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿ ನಿರ್ವಹಿಸಿದ ಕಾರ್ಯ ಇಂದಿಗೂ ಅನುಕರಣೀಯ. ಪುರಾತತ್ವ ಇಲಾಖೆಯ ಮಹಾನಿರ್ದೇಶಕರಾಗಿಯೂ ಅನ್ವೇಷಣೆ ಮತ್ತು ಸಂಶೋಧನೆಯನ್ನು ತನ್ನ ಮುಖ್ಯ ಕಾರ್ಯವನ್ನಾಗಿ ಮಾಡಿಕೊಂಡು ಇಲಾಖೆಗೆ ಭದ್ರ ಬುನಾದಿಯನ್ನು ಕಲ್ಪಿಸಿದ ಕೀರ್ತಿ ಕನ್ನಿಂಗ್‌ಹ್ಯಾಮ್‌ರಿಗೆ ಸಲ್ಲುತ್ತದೆ. ತನ್ನ ಇಲಾಖೆ ಮತ್ತಷ್ಟು ವಿಸ್ತಾರಗೊಳ್ಳಬೇಕೆಂಬ ಉದ್ದೇಶದಿಂದ ಎರಡು ಪ್ರಾದೇಶಿಕ ವಲಯಗಳನ್ನಾಗಿ ವಿಭಾಗಿಸುವ ಯೋಜನೆ ರೂಪಿಸುತ್ತಾರೆ. ಅದರ ಅಂಗವಾಗಿ ಮದ್ರಾಸ್‌ನಲ್ಲಿ ದಕ್ಷಿಣ–ಭಾರತದ ವಲಯಗಳು ಮತ್ತು ಮುಂಬೈನಲ್ಲಿ ಪಶ್ಚಿಮ–ವಲಯ ಸ್ಥಾಪನೆಗೊಳ್ಳುತ್ತವೆ. ಅವರು ಭಾರತದ ಪ್ರಾಚೀನ ಶಾಸನಗಳ ಅಧ್ಯಯನಕ್ಕೆ ನೀಡಿದ ಆದ್ಯತೆ ಗಮನಿಸುವಂತದ್ದು. ಪ್ರಾಚೀನ ಕಾಲದಲ್ಲಿ ಆಳಿದ ಸಾಮ್ರಾಜ್ಯಗಳ ಎಲ್ಲಾ ಶಾಸನಗಳನ್ನು ಒಂದೆಡೆ ಸಂಗ್ರಹಿಸಿ ಅವುಗಳನ್ನು ಸಂಪುಟಗಳ

ರೂಪದಲ್ಲಿ ಪ್ರಕಟಿಸುವ ಸಂಪ್ರದಾಯ ಪ್ರಾರಂಭಿಸಿದರು. ಮೌರ್ಯ, ಗುಪ್ತ ಮನೆತನಗಳ ಶಾಸನ ಸಂಪುಟಗಳು ಇವರ ಅವಧಿಯಲ್ಲಿ ಪ್ರಕಟಗೊಂಡವು. ನಾಣ್ಯಶಾಸ್ತ್ರಕ್ಕೂ ಬಹು ಮಹತ್ವತೆಯನ್ನು ನೀಡಿದ್ದಾರೆ. ಅನೇಕ ಲೇಖನಗಳು ನಾಣ್ಯಗಳ ಅಧ್ಯಯನಕ್ಕೆ ಸಂಬಂಧಿಸಿದವು. ಲಡಾಖ್, ಕಾಶ್ಮೀರ ಅಫಘಾನಿಸ್ತಾನ್, ಪಂಜಾಬ್ ಮತ್ತಿತ್ತರ ಪ್ರದೇಶಗಳ ಭೌಗೋಳಿಕ ಲಕ್ಷಣಗಳನ್ನು ಚೆನ್ನಾಗಿ ಅರಿತಿದ್ದ ಕನ್ನಿಂಗ್‌ಹ್ಯಾಮ್ ಪ್ರಾಚೀನ ನೆಲೆಗಳನ್ನು ಗುರುತಿಸುವಲ್ಲಿ ಸಫಲರಾದರು.

ಇವರ ಪುರಾತತ್ವ ಅಧ್ಯಯನಗಳು ಜಾಗತೀಕ ಮಟ್ಟದಲ್ಲಿ ಗಮನ ಸೆಳೆದಿದ್ದವು ಐರೋಪ್ಯ ದೇಶಗಳ ಪತ್ರಿಕೆಗಳು ಇವರ ಸಾಧನೆಯನ್ನು ಕಂಡು ಶ್ಲಾಘಿಸಿದ್ದವು. ಅಲ್ಲದೆ ಇವರ ಅನುಪಮ ಸೇವೆಗಾಗಿ ಬ್ರಿಟಿಷ್ ಸರ್ಕಾರ 1867ರಲ್ಲಿ **'ಸರ್'** ಎಂಬ ಬಿರುದು ನೀಡಿ ಗೌರವಿಸಿತು. ಅವಿರತ ಅನ್ವೇಷಣೆ ಮತ್ತು ಸಂಶೋಧನೆಗಳನ್ನು ಪೂರೈಸಿ 1885ರಲ್ಲಿ ಪುರಾತತ್ವ ಇಲಾಖೆಯಿಂದ ನಿವೃತ್ತಿ ಹೊಂದಿ ತಮ್ಮ ತಾಯ್ನಾಡಿಗೆ ತೆರಳಿ ವಿಶ್ರಾಂತಿ ಜೀವನ ನಡೆಸಿದರು. ಇವರು ತಮ್ಮ 79ನೇ ವಯಸ್ಸಿನಲ್ಲಿ ಅಂದರೆ 1893ರಲ್ಲಿ ಇಂಗ್ಲೆಂಡಿನಲ್ಲಿ ವಿಧಿವಶರಾದರು. ಇವರು ನಮ್ಮನ್ನಗಲಿ 120 ವರ್ಷಗಳಾದರೂ, ಇಂದಿಗೂ ಇವರ ಸಂಶೋಧನೆಗಳು ಭಾರತೀಯ ಪುರಾತತ್ವ ಅಧ್ಯಯನಗಳಲ್ಲಿ ಮೈಲಿಗಲ್ಲಾಗಿವೆ.

**ಕೃತಜ್ಞತೆಗಳು:** ಲೇಖನದ ಕರಡನ್ನು ತಿದ್ದಿದ ಗೆಳೆಯ ವೆಂಕಟೇಶ ಮಾನು ಹಾಗೂ ಅಕ್ಷರ ಜೋಡಣೆಯನ್ನು ಮಾಡಿದ ನನ್ನ ಸಹೋದ್ಯೋಗಿ ಶ್ರೀಮತಿ ಪರಿಮಳ ಮತ್ತು ಲೇಖನಕ್ಕೆ ಸೂಕ್ತ ಸಲಹೆಗಳನ್ನು ನೀಡಿದ ಮಿತ್ರರಾದ ಹಂ.ಗು. ರಾಜೇಶ ಅವರಿಗೆ ನನ್ನ ಕೃತಜ್ಞತೆಗಳು.

## ಆಧಾರ ಗ್ರಂಥಗಳು

Imam Abu. 1963. 'Sir Alexander Cunningham (1814-1893) and First Phase of Indian Archaeology'. *Journal of the Royal Asiatic Society of Great Britain and Ireland No. 3/4.* Pp. 194-207.

Imam Abu. 1966. *Sir Alexander Cunningham and the Beginnings of Indian Archaeology.* Dacca.

Singh, Purshotam. 2005. 'Sir Alexander Cunningham (1814- 1893)', in R.K. Sharma and Devinder Handa (Eds.) *Revealing India's Past: Recent Trends ion Art and Archaeology – Professor Ajay Mitra Shastri Commemoration Volume.* Aryan Publications, New Delhi. Pp. 88-91.

Singh, Upinder 2004. *The Discovery of Ancient India- Early Archaeologists and the Beginnings of Archaeology,* Permanent Black Publications, Delhi.

Singh, Upinder. 2009. 'Alexander Cunningham's Contributions to Indian Archaeology', in Gautam Sen Gupta and Kaushik Gangopadhyaya (Eds.) *Archaeology in India- Individuals, Ideas and Institutions. Munshiram & Manoharlal* Publications, New Delhi. Pp. 60-75.

■

# ಶತಮಾನದ ಕನ್ನಡ ಸಾಹಿತ್ಯ ಪರಿಷತ್ತು : ಅವಲೋಕನ

□ **ಲಕ್ಷ್ಮಣ್ ತೆಲಗಾವಿ**
c/o ಶ್ರೀ. ಪಿ.ಎಸ್. ಸಾಂಬ್ರಾಣಿ
#15, ಸೋಮಶೇಖರ ನಿಲಯ,
ಯಲ್ಲಮ್ಮದೇವಿ ಹೌಸಿಂಗ್
ಸೊಸೈಟಿ, ರಜತಗಿರಿ,
ಧಾರವಾಡ–580004.

ಕನ್ನಡದ ಸೇವೆಗೆ ಕಂಕಣ ಬದ್ಧವಾಗಿರುವ ಕರ್ನಾಟಕದ ಎರಡು ಮಹಾನ್ ಸಂಘಗಳೆಂದರೆ, ಉತ್ತರ ಕರ್ನಾಟಕ ಭಾಗದ 'ಕರ್ನಾಟಕ ವಿದ್ಯಾವರ್ಧಕ ಸಂಘ' ಮತ್ತು ದಕ್ಷಿಣ ಕರ್ನಾಟಕ ಭಾಗದ 'ಕನ್ನಡ ಸಾಹಿತ್ಯ ಪರಿಷತ್ತು'. ಕ್ರಮವಾಗಿ ಧಾರವಾಡ ಮತ್ತು ಬೆಂಗಳೂರು ನಗರಗಳು ಇವುಗಳಿರುವ ನೆಲೆಗಳು. ಕನ್ನಡ ತಾಯಿಯ ಎರಡು ಕಣ್ಣುಗಳು ಈ ಎರಡು ಸಂಸ್ಥೆಗಳು; ಏಕೀಕೃತ ಕರ್ನಾಟಕದ ಭಾಷೆ ಮತ್ತು ಸಂಸ್ಕೃತಿಗಳ ಸಂರಕ್ಷಣೆ ಮತ್ತು ಏಳಿಗೆಗಳಿಗೆ ಮೀಸಲಾಗಿರುವಂಥವು. 1890 ಜುಲೈ 20ರಂದು ಅಸ್ತಿತ್ವಕ್ಕೆ ಬಂದ ಕರ್ನಾಟಕ ವಿದ್ಯಾವರ್ಧಕ ಸಂಘವು ಇದೀಗ ತನ್ನ 125 ವರ್ಷಗಳ ಆಚರಣೆಗೆ ಸಿದ್ಧಗೊಂಡಿದ್ದರೆ, 1915 ಮೇ 5ರಂದು ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ಇದೀಗ ತನ್ನ ಶತಮಾನೋತ್ಸವ ಸಂಭ್ರಮಾಚರಣೆಯ ಹಂತಕ್ಕೆ ಬಂದು ತಲುಪಿದೆ. ಕನ್ನಡ – ಕರ್ನಾಟಕಗಳ ಶ್ರೇಯೋಭಿವೃದ್ಧಿಗೆ ಶ್ರಮಿಸುತ್ತಿರುವ ಈ ಎರಡು ಮಹಾನ್ ಸಂಸ್ಥೆಗಳಿಗೆ ಈ ನಾಡವರು ಎಷ್ಟು ಋಣಿಗಳಾಗಿದ್ದರೂ ಸಾಲದು !

**ಪರಿಷತ್ತಿನ ಸ್ಥಾಪನೆಯ ಹಿನ್ನೆಲೆ ಮತ್ತು ಉದ್ದೇಶ:**

ಕರ್ನಾಟಕದ ಸಾಹಿತ್ಯ ಸಂಸ್ಥೆಗಳ ಹುಟ್ಟಿನ ಹಿನ್ನೆಲೆಯಲ್ಲಿ ಮೊದಲಿಗೆ ಪ್ರಸ್ತಾಪಿಸಬೇಕಾದುದು ಮೈಸೂರು ಒಡೆಯರ ಪ್ರೋತ್ಸಾಹವನ್ನು. ಕನ್ನಡ ಭಾಷೆ ಸಾಹಿತ್ಯಗಳ ಅಭಿವೃದ್ಧಿಗೆ ಪ್ರೇರಣೆ, ಪ್ರೋತ್ಸಾಹ, ಆಸರೆಗಳನ್ನು ನೀಡಿದವರು ಚಾಮರಾಜೇಂದ್ರ ಒಡೆಯರ್ ಅವರು. ಮೈಸೂರಿನಲ್ಲಿ ಕರ್ಣಾಟಕ ಭಾಷೋಜ್ಜೀವಿನಿ ಸಭಾ

ಸ್ಥಾಪನೆಗೊಂಡುದು ಆಗಲೇ. ವಿದ್ವಾಂಸರಿಂದ ರಚಿತವಾದ ಕನ್ನಡ ಗ್ರಂಥಗಳು ಪ್ರಕಟಗೊಳ್ಳತೊಡಗಿದವು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ಚಿತ್ತನೆಗೊಂಡ ಸಾಹಿತ್ಯ ಕೃಷಿ ಮುಂದುವರೆಯಿತು. ಇದರಿಂದ ಸ್ಫೂರ್ತಿಗೊಂಡಂತೆ ಭಾಷಾಪ್ರೇಮದ ಬೀಜವು ಧಾರವಾಡದಲ್ಲಿ 20 ಜುಲೈ 1890ರಲ್ಲಿ ಸ್ಥಾಪನೆಗೊಂಡ ಕರ್ನಾಟಕ ವಿದ್ಯಾವರ್ಧಕ ಸಂಘದ ಮೂಲಕ ಮತ್ತಷ್ಟು ಚಿತ್ತನೆಯಾಯಿತು. ಉತ್ತರ ಕರ್ನಾಟಕದಲ್ಲಿ ವಿದ್ಯಾವರ್ಧಕ ಸಂಘದ ಸ್ಥಾಪನೆಯ ನಂತರ, 1892ರಲ್ಲಿ ಕರ್ನಾಟಕ ಭಾಷೋಜ್ಜೀವಿನಿ ಸಭಾ ಮತ್ತು 1916ರಲ್ಲಿ ಕರ್ನಾಟಕ ಸಭಾಗಳೆಂಬ ಕನ್ನಡ ಪರ ಸಂಘ-ಸಂಸ್ಥೆಗಳು ಹುಟ್ಟಿಕೊಂಡವು.

ವಿವಿಧ ಮೂಲಗಳಿಂದ ತಿಳಿದುಬರುವಂತೆ, ಪರಿಷತ್ತು ಸ್ಥಾಪನೆಯಾದುದು ಆಲೂರು ವೆಂಕಟರಾಯರು ಮತ್ತು ಅವರ ಸ್ನೇಹಿತರ ಸತತ ಪ್ರಯತ್ನಗಳಿಂದ. ಆಲೂರರು ತಾವೊಬ್ಬರೆ ಇದರ 'ಮೂಲ ಸಂಸ್ಥಾಪಕ'ರೆಂದು ಹೇಳಿಕೊಂಡಿದ್ದಾರೆ[1]. ಪರಿಷತ್ತಿನ ಸ್ಥಾಪನೆಯ ಆರಂಭಿಕ ಪ್ರಯತ್ನವು 1907-08ರಲ್ಲಿ ಧಾರವಾಡದಲ್ಲಿ ನಡೆದ ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಳನದಲ್ಲಿ ಎಂಬುದು ಸ್ಪಷ್ಟವಾಗುತ್ತದೆ.[2] ಅಂದರೆ ವಿದ್ಯಾವರ್ಧಕ ಸಂಘದ ಸದಸ್ಯರನ್ನು ಒಳಗೊಂಡಂತೆ, ಆಲೂರರು ಮೊದಲಾದವರು ಕನ್ನಡ ಮಾತನಾಡುವ ವಿವಿಧ ಪ್ರದೇಶಗಳ ಕನ್ನಡಿಗರು ಒಂದೆಡೆ ಪರಸ್ಪರ ಭಾವನಾತ್ಮಕವಾಗಿ ಬೆರೆಯುವಂತೆ ಮಾಡಿದರು. ಮೂರನೆಯ ಸಮ್ಮೇಳನವನ್ನು ಕನ್ನಡಿಗರ ರಾಜಮನೆತನವಿದ್ದ ಹಾಗೂ ಕರ್ನಾಟಕದ ಕೇಂದ್ರಸ್ಥಾನವೆನಿಸಿದ ಮೈಸೂರು ಸಂಸ್ಥಾನದ ಬೆಂಗಳೂರಿನಲ್ಲಿ ನಡೆಸಿ ಪರಿಷತ್ತೊಂದನ್ನು ಸ್ಥಾಪಿಸಲು ಪ್ರಯತ್ನಿಸಿದರು. ಇವರು "ಕನ್ನಡನಾಡು ಒಂದು, ನಾವು ನಮ್ಮ ಭಾಷೆ, ಸಂಸ್ಕೃತಿಗಳನ್ನು ಒಂದಾಗಿ ಅಭಿವೃದ್ಧಿಗೊಳಿಸಬೇಕು"[3] ಎಂಬುದಾಗಿ ಹೇಳಿ ಅಖಿಲ ಕರ್ನಾಟಕವನ್ನು ಪ್ರತಿನಿಧಿಸುವ ಸಂಸ್ಥೆಯೊಂದರ ಸ್ಥಾಪನೆಯ ಅಗತ್ಯತೆಯ ಬಗ್ಗೆ ಮೈಸೂರಿನವರ ಸಹಕಾರವನ್ನು ಬಯಸಿದ್ದರು. ಆದರೆ ಉತ್ತರ ಕನ್ನಡಿಗರ ಸತತ ಪ್ರಯತ್ನಗಳಿಂದ ಮೈಸೂರಿನ ವೆಂಕಟಕೃಷ್ಣಯ್ಯ, ಕರ್ಪೂರ ಶ್ರೀನಿವಾಸಯ್ಯರವರಂಥವರ ಬೆಂಬಲ ಸಿಕ್ಕಿತು.[4]

ಇಷ್ಟಲ್ಲದೆ, ಕನ್ನಡ ಸಾಹಿತ್ಯ ಪರಿಷತ್ತಿನ ಹುಟ್ಟಿನ ಹಿನ್ನೆಲೆಯಲ್ಲಿ ರಾಷ್ಟ್ರೀಯ ಚಳವಳಿಗಳ ಪ್ರಭಾವವನ್ನು ಕಾಣಬಹುದು. 1905ರಲ್ಲಿ ಸಂಭವಿಸಿದ ಬಂಗಾಲದ ವಿಭಜನೆ ಅಥವಾ 'ವಂಗಭಂಗ'ದ ಘಟನೆಯು ಭಾಷಾ ಸ್ವಾತಂತ್ರ್ಯ ಮತ್ತು ಪ್ರಾಂತ್ಯಾಭಿಮಾನಗಳಿಗೆ ಹೊಸ ಸ್ಫೂರ್ತಿಯನ್ನು ಹುಟ್ಟುಹಾಕಿತು. ಈ ಸಂದರ್ಭದಲ್ಲಿ ಉತ್ಕಲ ಐಕ್ಯ ಪರಿಷತ್, ವಂಗೀಯ ಸಾಹಿತ್ಯ ಪರಿಷತ್‌ಗಳು ಉದಯವಾದವು. ಒರಿಸ್ಸಾ, ಬಿಹಾರ, ಬಂಗಾಳ ಪ್ರಾಂತ್ಯಗಳು ರೂಪುಗೊಂಡವು. ಈ ಘಟನೆಗಳು ಕನ್ನಡಿಗರನ್ನು ಪ್ರಭಾವಿಸಿದುದು ವಾಸ್ತವ. ಕರ್ನಾಟಕ ಸಾಹಿತ್ಯ ಪರಿಷತ್ತಿನ ಹುಟ್ಟಿಗೆ ಇವೆಲ್ಲವೂ ಕಾರಣವಾದವು. ಇದರೊಡನೆ, ಮುಂಬಯಿ ಕನ್ನಡಿಗರು ಕನ್ನಡ ಮಾತನಾಡುವ ಪ್ರದೇಶಗಳನ್ನು ಅಖಂಡವಾಗಿಸುವ ಪ್ರಯತ್ನ ನಡೆಸಿದುದು ಕನ್ನಡ ಭಾಷೆ-ಸಂಸ್ಕೃತಿಗಳ ಸಂರಕ್ಷಣೆಯೊಂದಿಗೆ ಕನ್ನಡಿಗರನ್ನು ಸಂಘಟಿಸುವಿಕೆಯ ಅನಿವಾರ್ಯತೆಯನ್ನು ಮನಗಾಣಿಸಿಕೊಟ್ಟಿತು.

ಈ ಹಿನ್ನೆಲೆಯಲ್ಲಿ, ಭೌಗೋಳಿಕವಾಗಿ ಮತ್ತು ರಾಜಕೀಯವಾಗಿ ವಿವಿಧ ಪ್ರದೇಶಗಳಲ್ಲಿ ಹಂಚಿಹೋಗಿದ್ದ ಕನ್ನಡಿಗರನ್ನು ಒಗ್ಗೂಡಿಸಲು, ಕನ್ನಡ ಭಾಷೆ-ಸಂಸ್ಕೃತಿಗಳನ್ನು ಸಂರಕ್ಷಿಸಲು ನಾಡಿನ ಕನ್ನಡಾಭಿಮಾನಿಗಳು ಸಂಘಟಿತ ಪ್ರಯತ್ನವನ್ನಾರಂಭಿಸಿದರು. ಮೈಸೂರು ಸಂಸ್ಥಾನದ

ಅಂದಿನ ದಿವಾನರಾಗಿದ್ದ ಸರ್.ಎಂ.ವಿಶ್ವೇಶ್ವರಯ್ಯ ಅವರು ಈ ಪ್ರಯತ್ನದ ಸಂಬಂಧಗಳಲ್ಲಿ ಸಲಹೆ-ಸೂಚನೆಗಳನ್ನು ಕೊಡಲು 'ಮೈಸೂರು ಸಂಪದಭ್ಯುದಯ ಸಮಾಜ'(Mysore Economic Conference)ವನ್ನು ರಚಿಸಿದರು; ವಿದ್ಯಾವಿಷಯಗಳಿಗಾಗಿ ಸಂಬಂಧಪಟ್ಟ ಯೋಜನೆಗಳನ್ನು ರಾಜಮಂತ್ರ ಪ್ರವೀಣ ಎಚ್.ವಿ.ನಂಜುಂಡಯ್ಯ ಅವರಿಗೆ ವಹಿಸಿದರು. ನಂಜುಂಡಯ್ಯ ಅವರು 'ವಿದ್ಯಾವಿಷಯಕ ಮಂಡಲಿ'ಯ ಮೂಲಕ ಕಾರ್ಯನಿರ್ವಹಿಸಿದರು. ಸಂಪದಭ್ಯುದಯ ಸಮಾಜವು 1914ರ ವಾರ್ಷಿಕ ಅಧಿವೇಶನದಲ್ಲಿ ಅಂಗೀಕರಿಸಿದ ನಿರ್ಣಯವೆಂದರೆ, "ಕರ್ಣಾಟಕ ಭಾಷೆಯಲ್ಲಿ ವಿವಿಧ ಗ್ರಂಥಗಳನ್ನು ರಚಿಸುವವರ ಪ್ರೋತ್ಸಾಹಕ್ಕಾಗಿ, ಸ್ವತಂತ್ರಾಧಿಕಾರವುಳ್ಳ ಪರಿಷತ್ತೊಂದು ಇರಬೇಕು ಮತ್ತು ಸರಕಾರದವರು ಆ ಪರಿಷತ್ತನ್ನು ಅಂಗೀಕರಿಸಿ ಅದಕ್ಕೆ ವಿಶೇಷ ಸಹಾಯ ಮಾಡುವುದು ಉಚಿತವೆಂದು ಸಂಪದಭ್ಯುದಯ ಸಮಾಜವು ಸರಕಾರಕ್ಕೆ ಶಿಫಾರಸ್ಸು ಮಾಡಬೇಕು."

ಈ ತೀರ್ಮಾನದ ಮೇರೆಗೆ 1914 ಅಕ್ಟೋಬರ್ 31ರಂದು ಮಂಡಲಿಯು ರಾವ್ ಬಹಾದ್ದೂರ್ ಎಂ. ಶಾಮರಾವ್, ರಾಜ ಸಭಾ ಭೂಷಣ ಕರ್ಪೂರ ಶ್ರೀನಿವಾಸರಾವ್ ಮತ್ತು ಡಾ.ಪಿ.ಎಸ್.ಅಚ್ಯುತರಾವ್ ಅವರುಗಳನ್ನೊಳಗೊಂಡ ಉಪಸಮಿತಿಯೊಂದನ್ನು ರಚಿಸಿತು. ಈ ಉಪಸಮಿತಿಯು ಕನ್ನಡ ಭಾಷಾಸಾಹಿತ್ಯದ ಅಭಿವೃದ್ಧಿಯ ಮಾರ್ಗವನ್ನು ಕುರಿತು ಸಲಹೆ ಪಡೆಯಲು ವಿಷಯಗಳನ್ನು ಐದು ಭಾಗಗಳನ್ನಾಗಿ ವಿಂಗಡಿಸಿಕೊಂಡಿತಲ್ಲದೆ, ಈ ಕುರಿತು ಸಲಹೆ ನೀಡಲು ನಾಡಿನ ವಿವಿಧ ಭಾಗಗಳ ವಿದ್ವಾಂಸರನ್ನು ಕೋರಿತು. ಅವರಿಂದ ಬಂದ ಸಲಹೆ – ಸೂಚನೆಗಳನ್ನನುಸರಿಸಿ ಬೆಂಗಳೂರಿನಲ್ಲಿ ಒಂದು ಸಮ್ಮೇಳನವನ್ನು ಏರ್ಪಡಿಸಬೇಕೆಂದು ಉಪಸಮಿತಿಯು ನಿರ್ಧರಿಸಿ ಸಮ್ಮೇಳನದ ಏರ್ಪಾಟು ಮಾಡಿತು.

ಅದರಂತೆ, 1915 ಮೇ 3ರಂದು ಬೆಂಗಳೂರಿನ ಸರ್ಕಾರಿ ಪ್ರೌಢಶಾಲೆ(ಇಂದಿನ ಕೋಟೆ ಪ್ರೌಢಶಾಲೆ)ಯ ವಿಶಾಲ ಹಜಾರದಲ್ಲಿ ಆರಂಭಗೊಂಡ ಸಮ್ಮೇಳನದಲ್ಲಿ ನಾಡಿನ ನಾನಾ ಭಾಗಗಳಿಂದ ಮತ್ತು ಹೊರ ರಾಜ್ಯಗಳಿಂದ ಬಂದ ಪ್ರತಿನಿಧಿಗಳು ಹಾಗೂ ಪತ್ರಿಕಾ ಸಂಪಾದಕರುಗಳು ಹಾಜರಿದ್ದರು. ಎಚ್.ವಿ. ನಂಜುಂಡಯ್ಯ ಅವರನ್ನು 'ಅಗ್ರಸ್ಥಾನಾಧಿಪತಿ'ಗಳನ್ನಾಗಿ ಒಮ್ಮತದಿಂದ ಚುನಾಯಿಸಲಾಯಿತು. ನಾಲ್ಕು ದಿನಗಳ ಕಾಲ ನಡೆದ ಈ ಸಮ್ಮೇಳನದ ಎರಡನೆಯ ದಿನದ ಅಧಿವೇಶನಕ್ಕೆ ದಿವಾನ್ ಬಹಾದ್ದೂರ್, ರಾಜ ಸಭಾ ಭೂಷಣ ಕೆ.ಪಿ. ಪುಟ್ಟಣ್ಣ ಚೆಟ್ಟಿ ಅವರು; ಹಾಗೂ ಮೂರು ಮತ್ತು ನಾಲ್ಕನೆಯ ದಿನಗಳ ಅಧಿವೇಶನಗಳಿಗೆ ರಾಜ ಸಭಾ ಭೂಷಣ ಕರ್ಪೂರ ಶ್ರೀನಿವಾಸರಾಯರು ಅಧ್ಯಕ್ಷತೆ ವಹಿಸಿದ್ದರು. ಎರಡನೆಯ ದಿನದ ಅಧಿವೇಶನದಲ್ಲಿ ಅಂಗೀಕರಿಸಲ್ಪಟ್ಟ ನಿರ್ಣಯಗಳು ಮೂರು. ಅವುಗಳೆಂದರೆ, 1. ಕರ್ಣಾಟಕ ಭಾಷಾ ಸಂಸ್ಕರಣಕ್ಕಾಗಿಯೂ ಕರ್ಣಾಟಕ ಗ್ರಂಥಾವಳಿಯ ಅಭಿವೃದ್ಧಿಗಾಗಿಯೂ ಬೆಂಗಳೂರಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಎಂಬ ಹೆಸರಿನೊಡನೆ ಪ್ರಧಾನ ಸಭೆಯೊಂದು ಸ್ಥಾಪಿತವಾಗಬೇಕು; 2. ಬೊಂಬಾಯಿ, ಮದರಾಸು, ಹೈದರಾಬಾದು, ಕೊಡಗು ಪ್ರಾಂತ್ಯಗಳಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಶಾಖೆಗಳಿರಬೇಕು. ಮತ್ತು ಪರಿಷತ್ತಿನ ಈ ಉದ್ದೇಶಗಳನ್ನೇ ಇಟ್ಟುಕೊಂಡು ಕೆಲಸ ಮಾಡುವ ಇತರ ಸಂಘಗಳನ್ನು ತನ್ನ ಜೊತೆಗೆ ಸೇರಿಸಿಕೊಳ್ಳುವುದಕ್ಕೆ ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಅಧಿಕಾರವಿರಬೇಕು. 3. ಒಂದು ಉಪಸಮಿತಿ ಸೇರಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ

ರಚನಾಕ್ರಮ ಮತ್ತು ನಿಮಯಮಗಳ ಮಸೂದೆಯನ್ನು ತಯಾರುಮಾಡಿ ಸಮ್ಮೇಳನದ ಮೂರನೆಯ ದಿವಸವೇ ಸಭೆಗೆ ಒಪ್ಪಿಸಬೇಕು.

ಸರ್ವಶ್ರೀ ಎಂ. ವೆಂಕಟಕೃಷ್ಣಯ್ಯ, ಆರ್.ಎಚ್. ದೇಶಪಾಂಡೆ, ಸೆಟ್ಲೂರ್, ಎಚ್. ಲಿಂಗರಾಜೇ ಅರಸು, ಎನ್.ಜಿ. ಕರಿಗುದರಿ, ಬಿ. ರಾಮರಾವ್, ಪಂಡಿತ ರಾಘವೇಂದ್ರಾಚಾರ್ಯರು – ಇವರೆಲ್ಲ ಒಟ್ಟಿಗೆ ಸೇರಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ರಚನಾಕ್ರಮ ಮತ್ತು ನಿಯಮಗಳ ಮಸೂದೆಯನ್ನು ಒಂದೇ ದಿನದಲ್ಲಿ ಸಿದ್ಧಪಡಿಸಿದುದೊಂದು ಸಾಧನೆ. 31 ಕಲಮುಗಳು, 5 ನಿಬಂಧನೆಗಳನ್ನು ಒಳಗೊಂಡಿದ್ದ ಈ ಅಂಗರಚನೆಯು 1915 ಮೇ 5ರಂದು, ಅಂದರೆ ಸಮ್ಮೇಳನದ ಮೂರನೆಯ ದಿನದಂದು ಸಭೆಯಲ್ಲಿ ಮಂಡಿಸಲ್ಪಟ್ಟಿತು. ಚರ್ಚೆಯ ನಂತರ ಸರ್ವಾನುಮತದಿಂದ ಅಂಗೀಕರಿಸಲ್ಪಟ್ಟಿತು. ಹೀಗೆ ವಿಧಿವತ್ತಾಗಿ ಸ್ವೀಕರಿಸಲಾದ ಈ ಅಂಗರಚನೆಯನ್ನು ಕಾರ್ಯಗತಗೊಳಿಸುವುದರೊಡನೆ ಸ್ಥಾಪನೆಗೊಂಡಿತು. ಒಟ್ಟು 113 ಮಂದಿ ಸದಸ್ಯರೊಡನೆ ಆರಂಭಗೊಂಡುದು ಈ ಪರಿಷತ್ತು. ಸಮ್ಮೇಳನದಲ್ಲಿ ಉಚಿತಧನ ಮತ್ತು ವಾರ್ಷಿಕ ಚಂದಾಹಣವೆಂದು ಸಂಗ್ರಹಗೊಂಡ ಒಟ್ಟು ಮೊತ್ತ 3174 ರೂಪಾಯಿಗಳು.

ಕರ್ನಾಟಕದ ನಾಡು–ನುಡಿ, ಸಂಸ್ಕೃತಿ, ನೆಲ–ಜಲ ಮುಂತಾದ ಸಮಗ್ರ ಕರ್ನಾಟಕ–ಕನ್ನಡದ ಅಭಿವೃದ್ಧಿಗಾಗಿ ದುಡಿಯುವ ಮುಂಚೂಣಿ ಸಂಸ್ಥೆಯಾಗಿ ಅವತರಿಸಿದ ಈ ಮಹಾನ್ ಸಂಸ್ಥೆಯು ಮೂಲದಲ್ಲಿ ಹೊಂದಿದ್ದ ಹೆಸರು 'ಕರ್ಣಾಟಕ ಸಾಹಿತ್ಯ ಪರಿಷತ್ತು'. ಈಗಿನ ಕನ್ನಡ ಸಾಹಿತ್ಯ ಪರಿಷತ್ತು ಎಂದು ಮಾರ್ಪಾಡಾದುದು 1938ರಲ್ಲಿ, ಬಳ್ಳಾರಿಯಲ್ಲಿ ನಡೆದ 23ನೇ ಸಾಹಿತ್ಯ ಸಮ್ಮೇಳನದ ಸದಸ್ಯ ಸಭೆಯ ನಿರ್ಣಯದ ಮೇರೆಗೆ.

ಕರ್ನಾಟಕ ಭಾಷಾ ಪರಿಷ್ಕರಣ, ಭಾಷೋನ್ನತಿ, ಕರ್ನಾಟಕ ಗ್ರಂಥಾಭಿವೃದ್ಧಿ – ಇವು ಪರಿಷತ್ತಿನ ಮೂಲೋದ್ದೇಶಗಳು. ಕಾರ್ಯನಿರ್ವಾಹಕ ಮಂಡಲಿ ರೂಪಿಸಿದ ನಿಬಂಧನೆಗಳ ಮುಖ್ಯಾಂಶಗಳೆಂದರೆ, ವಾರ್ಷಿಕ ಸಮ್ಮೇಳನ ಕಾಲದಲ್ಲಿ ವಿದ್ವಾಂಸರ ಉಪನ್ಯಾಸ ಮತ್ತು ಪ್ರೌಢಲೇಖನಗಳ ವಾಚನಗಳನ್ನು ಏರ್ಪಡಿಸುವುದು; ಪ್ರಸಿದ್ಧ ಪಂಡಿತರನ್ನು ಪರಿಷತ್ತಿಗೆ ಸನ್ಮಾನ್ಯ ಸಾಮಾಜಿಕರನ್ನಾಗಿ ಸೇರಿಸಿಕೊಳ್ಳಲು ಪರಿಷತ್ತಿನ ಸಾಮಾನ್ಯಸಭೆಗೆ ಶಿಫಾರಸು ಮಾಡುವುದು ಇತ್ಯಾದಿ. ಈ ನಿಬಂಧನೆ ಅಂಗರಚನೆಗಳಲ್ಲಿ ಕಾಲಕಾಲಕ್ಕೆ ಕಾಲೋಚಿತ ಬದಲಾವಣೆಗಳನ್ನು ಕೇವಲ ಪಂಡಿತರಿಗೆ ಸೀಮಿತಗೊಳ್ಳದೆ ಜನಸಾಮಾನ್ಯರಿಗೂ ಸೇರಿದ ಸಂಸ್ಥೆಯೆನಿಸಲು ಪ್ರಾಂತ ಸಮಿತಿಗಳನ್ನು ರಚಿಸಿ ಸದಸ್ಯ ಸಂಪತ್ತನ್ನು ಹೆಚ್ಚಿಸುವ ಪ್ರಯತ್ನಕ್ಕೆ ಆಗ ಬೆಂಬಲ ದೊರಕಲಿಲ್ಲ. ಆದರೀಗ ಪರಿಷತ್ತು ಸಮಸ್ತ ಕನ್ನಡಿಗರನ್ನು ಕೂಡಿಸಿಕೊಂಡು ಏಕೀಕೃತ ಕರ್ನಾಟಕದ ಅಪೇಕ್ಷೆ–ಆಕಾಂಕ್ಷೆಗಳನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಪ್ರಾತಿನಿಧಿಕ ಸಂಸ್ಥೆಯಾಗಿ ರೂಪುತಳೆದಿದೆ.

**ಶ್ರೀ ಕೃಷ್ಣರಾಜ ಪರಿಷನ್ಮಂದಿರ:**

ಆರಂಭದಲ್ಲಿ 18 ವರುಷಗಳ ಕಾಲ ಪರಿಷತ್ತಿನ ಆಡಳಿತ ಕಚೇರಿಯು ಬಾಡಿಗೆ ಕಟ್ಟಡಗಳಲ್ಲಿ ನೆಲೆಗೊಂಡಿದ್ದಿತು. ಮೊದಲಿಗೆ, ಚಾಮರಾಜಪೇಟೆ 4ನೇ ಮುಖ್ಯರಸ್ತೆಯಲ್ಲಿದ್ದ ನಾನಾರಾಯ ಎಂಬುವರ ಮನೆಯ ಒಂದು ಕೊಠಡಿಯಲ್ಲಿದ್ದು, ಕಾರ್ಯನಿರ್ವಹಿಸುತ್ತಿದ್ದಿತು.

ಅನಂತರ 1923ರಲ್ಲಿ, ಶಂಕರಪುರದ ವಾಜಪೇಯಂ ಸೂರಪ್ಪ ಅವರ ಮನೆಯನ್ನು ತಿಂಗಳಿಗೆ 30 ರೂಪಾಯಿ ಬಾಡಿಗೆಯ ಮೇರೆಗೆ ಪಡೆದುಕೊಂಡು ಅಲ್ಲಿ ತನ್ನ ಕಚೇರಿಯನ್ನಾರಂಭಿಸಿತ್ತು. ಈಗಿರುವ ಸ್ಥಳದಲ್ಲಿ, ಅಂದರೆ ಹಿಂದೆ ಹಾರ್ಡಿಂಜ್ ರಸ್ತೆಯಾಗಿದ್ದು, ಈಗ ಪಂಪಮಹಾಕವಿಯೆನಿಸಿರುವ ಮಾರ್ಗದಲ್ಲಿ, ಪ್ರತಿಷ್ಠಿತ ಶ್ರೀ ಕೃಷ್ಣರಾಜ ಪರಿಷನ್ಮಂದಿರ (ಮೂಲದಲ್ಲಿರುವ ಹೆಸರು: ಶ್ರೀ ಕೃಷ್ಣರಾಜೇಂದ್ರ ಕರ್ಣಾಟಕ ಸಾಹಿತ್ಯ ಪರಿಷನ್ಮಂದಿರ) ಕಟ್ಟಡ ನಿರ್ಮಾಣಗೊಳ್ಳಲು ಕಾರಣರಾದವರು ಪರಿಷತ್ತಿನ ಸಂಸ್ಥಾಪಕ ಸದಸ್ಯರೂ ಮೈಸುರು ಸರ್ಕಾರದ ಮಾಜಿ ಛೀಫ್ ಎಂಜಿನಿಯರೂ 1920 ರಿಂದ 13 ವರುಷಗಳ ಕಾಲ ಪರಿಷತ್ತಿನ ಉಪಾಧ್ಯಕ್ಷರೂ ಆಗಿದ್ದ ರಾಜಸಭಾಭೂಷಣ, ವಿದ್ಯಾಭೂಷಣ ಕರ್ಪೂರ ಶ್ರೀನಿವಾಸರಾಯರು. ಕಟ್ಟಡದ ನಿರ್ಮಾಣಕ್ಕೆ ಅವಶ್ಯಕವಾಗಿದ್ದ ನಿವೇಶನಗಳನ್ನು ಉಚಿತವಾಗಿ ಪಡೆದು ಅಗತ್ಯವಿರುವಷ್ಟು ಹಣವನ್ನು ಸಂಗ್ರಹಿಸಿದವರೂ ಇವರೇ. ಮೈಸೂರು ಸಂಸ್ಥಾನದ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರ ನೆರವಿನಿಂದ, ಸ್ವಾತಂತ್ರ್ಯ ಚಳವಳಿ ಸಂಬಂಧಿ ಎಲ್ಲ ಸಭೆಗಳೂ ನಡೆಯುತ್ತಿದ್ದ ಹಾಗೂ ಗಾಂಧಿ ಮೈದಾನವೆಂದೇ ಕರೆಯಲಾಗುತ್ತಿದ್ದ ಇಂದಿನ ನಿವೇಶನವು ಉಚಿತವಾಗಿ ದೊರೆಯಿತು.

ಪರಿಷನ್ಮಂದಿರ ನಿರ್ಮಾಣನಿಧಿಗೆ ಸಹಾಯ ನೀಡಿದವರೆಂದರೆ

| | | |
|---|---|---|
| 1. | ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ | 5,000 ರೂಗಳು |
| 2. | ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ | 3,000 ರೂಗಳು |
| 3. | ರಾಜಬಂಧು, ರಾಜಸೇವಾಧುರೀಣ ಎಂ. ಕಾಂತರಾಜ ಅರಸು (ಆಗಿನ ಪರಿಷದಧ್ಯಕ್ಷರು) | 5,000 ರೂಗಳು |
| 4. | ದಿವಾನ್ ಮಿರ್ಜಾ ಇಸ್ಮಾಯಿಲ್ ಅವರ ನೆರವಿನಿಂದ ಮೈಸೂರು ಸರ್ಕಾರದಿಂದ ದೊರೆತ ದೇಣಿಗೆ | 15,289 ರೂಗಳು |
| 5. | ಪರಿಷತ್ತು ತನ್ನ ಸಂಪನ್ಮೂಲದಿಂದ ಒದಗಿಸಿದ್ದು | 3,000 ರೂಗಳು |

1928 ರಿಂದ ಮೈಸೂರು ಸರ್ಕಾರದಿಂದ 1,800 ರೂಗಳು ಅನುದಾನ ದೊರೆಯಲಾರಂಭವಾಯಿತು.

ಪರಿಷನ್ಮಂದಿರದ ಶಂಕುಸ್ಥಾಪನೆ ನಡೆದುದು 1931 ಏಪ್ರಿಲ್ 12ರಂದು; ಹಾಗೆಯೇ, ನಿರ್ಮಾಣಗೊಂಡ ಈ ನೂತನ ಕಟ್ಟಡಕ್ಕೆ ಶ್ರೀ ಕೃಷ್ಣರಾಜ ಪರಿಷನ್ಮಂದಿರವೆಂದು ನಾಮಕರಣ ಮಾಡಿ ಇದನ್ನು ಉದ್ಘಾಟಿಸಿದುದು 1933 ಮೇ 29ರಂದು. ಪರಿಷತ್ತಿನ ಆಡಳಿತ ಕಛೇರಿಯು ಈ ಮಂದಿರದಲ್ಲಿ ತನ್ನ ಕಾರ್ಯವನ್ನಾರಂಭಿಸಿತು.

**ಪರಿಷತ್ತನ್ನು ಬೆಳೆಸಿದವರು:**

ಆರಂಭದಿಂದಲೂ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳವಣಿಗೆಗೆ ನೆರವಾದವರ ಸಂಖ್ಯೆ ಕಡಿಮೆಯದಲ್ಲ. ಕನ್ನಡದ ಕಟ್ಟಾಳುಗಳು ಒಟ್ಟಿಗೆ ಸೇರಿ ಕಟ್ಟಿದ ಸಂಸ್ಥೆ ಇದು. ತಮ್ಮ ತನು-ಮನ-ಧನಗಳನ್ನು ವ್ಯಯಿಸಿ ಆತ್ಮಪೂರ್ವಕವಾಗಿ ದುಡಿದಂಥವರ ಸ್ಮರಣೆ ಇಂದು ಅತ್ಯಗತ್ಯ. ಮೈಸೂರು ಒಡೆಯರ ವಂಶದವರು ಉದಾರವಾಗಿ ನೀಡಿದ ಆಶ್ರಯ-ಪ್ರೋತ್ಸಾಹಗಳು

ಸ್ಮರಣಾರ್ಹ. ದಾಖಲೆಗಳು ತಿಳಿಸುವಂತೆ, ಪರಿಷತ್ತಿನ ಏಳಿಗೆಗೆ ಸಹಕಾರಿಯಾದುದು ರಾವ್‌ಬಹಾದ್ದೂರ್ ಎಂ. ಶಾಮರಾವ್, ಬೆಳ್ಳಾವೆ ವೆಂಕಟನಾರಾಣಪ್ಪ, ಡಿ.ವಿ. ಗುಂಡಪ್ಪ, ಎ.ಆರ್. ಕೃಷ್ಣಶಾಸ್ತ್ರಿ, ಬಿ.ಎಂ. ಶ್ರೀಕಂಠಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರಂಥಾ ಎಷ್ಟೋ ಮೇಧಾವಿಗಳು ವಹಿಸಿದ ಪರಿಶ್ರಮ. ಇಂಥಾ ಕಾರ್ಯದಲ್ಲಿ ಕೈಜೋಡಿಸಿದ ಸ್ಥಳೀಯ ಕನ್ನಡಿಗರು, ಗ್ರಾಮೀಣ ಭಾಗದ ಕನ್ನಡಿಗರು, ಅಸಂಖ್ಯ ಅಭಿಮಾನಿಗಳು, ವಿದ್ಯಾರ್ಥಿಗಳು ಮೊದಲಾದವರ ಪಾತ್ರವೇನಿದ್ದಿತೆಂಬುದನ್ನೂ ಗುರುತಿಸಬೇಕಾಗುತ್ತದೆ.

ಮುಖ್ಯವಾಗಿ, 'ಪರಿಷತ್ತು ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠ'ವೆಂದು ಸಾರಿದ ಕೀರ್ತಿ ಆಚಾರ್ಯ ಬಿ.ಎಂ. ಶ್ರೀಕಂಠಯ್ಯ ಅವರಿಗೇ ಸಲ್ಲಬೇಕು. ಪರಿಷತ್ತನ್ನು ಜನಸಾಮಾನ್ಯರ ಬಳಿಗೆ ಒಯ್ಯಲು ಇವರು ನಾಡಿನಾದ್ಯಂತ ಸುತ್ತಾಡಿದುದೇ ಸಾಕ್ಷಿ. ಇಂಥಾ ವರ್ಚಸ್ವಿ ಆಚಾರ್ಯರು ಪರಿಷತ್ತಿನ ಶ್ರೇಯೋಭಿವೃದ್ಧಿಗೆ ಪ್ರಾಂಜಲವಾಗಿ ಶ್ರಮಿಸಿದರು. ಉಪಾಧ್ಯಕ್ಷ ಸ್ಥಾನದಲ್ಲಿದ್ದು, ಪರಿಷತ್ತಿಗೆ ಅಗತ್ಯವಿದ್ದ ಅಚ್ಚುಕೂಟವನ್ನು ಸ್ಥಾಪಿಸಿದವರು ಇವರೇ. 1939ರಲ್ಲಿ 5,000 ರೂಪಾಯಿಗಳನ್ನು ದೇಣಿಗೆ ನೀಡಿ ಅದರ ಹುಟ್ಟಿಗೆ ಕಾರಣರಾದರು. ಮರುವರುಷ ಇನ್ನೊಂದು ಸಾವಿರ ರೂಪಾಯಿ ನೀಡಿದರು. 1940ರಲ್ಲಿ ಮುದ್ರಣಾಲಯದ ಕಟ್ಟಡ ಪೂರ್ಣಗೊಂಡಿತು. ಮೊದಲಿಗೆ ಇದಕ್ಕಿದ್ದ ಹೆಸರು 'ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ'. ಆ ನಂತರ 'ಬಿಎಂಶ್ರೀ ಅಚ್ಚುಕೂಟ' ಎಂದು ನಾಮಕರಣ ಮಾಡಲಾಯಿತು. ಈಗ ಇದು 'ಬಿಎಂಶ್ರೀ ಅಚ್ಚುಕೂಟ ಆಫ್‌ಸೆಟ್' ಆಗಿ ಬೆಳೆದಿದೆ.

**ಪರಿಷತ್ತಿನ ಅಧ್ಯಕ್ಷರುಗಳು:**

1915 ರಿಂದ ಇಲ್ಲಿಯವರೆಗೆ ಪರಿಷತ್ತಿನ ಅಧ್ಯಕ್ಷಸ್ಥಾನವನ್ನಲಂಕರಿಸಿದ ಮಹನೀಯರ ಸಂಖ್ಯೆ 24. ಇವರೆಲ್ಲರ ನಿರಂತರ ದುಡಿಮೆಯಿಂದಾಗಿ ಪರಿಷತ್ತು ಪ್ರಗತಿ ಸಾಧಿಸಲು ಸಾಧ್ಯವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆ, ಸಂವರ್ಧನೆಗೆ ಹೋರಾಡಿದ ಮಹನೀಯರಲ್ಲಿ ಪ್ರಮುಖರಾಗಿದ್ದವರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಎಚ್.ವಿ. ನಂಜುಂಡಯ್ಯ ಅವರು ಮೊದಲನೇ ಅಧ್ಯಕ್ಷರಾಗಿದ್ದವರು (1915–1920). ಇನ್ನಿತರ ಅಧ್ಯಕ್ಷರುಗಳೆಂದರೆ–

| | |
|---|---|
| ಸರ್.ಎಂ. ಕಾಂತರಾಜ ಅರಸು | 1920–1922 |
| ಕಂಠೀರವ ನರಸಿಂಹರಾಜ ಒಡೆಯರ್ | 1923–1940 |
| ಜಯಚಾಮರಾಜ ಒಡೆಯರ್ | 1940 |
| ಒಂಟಮುರಿಯ ರಾಜಾ ಲಖಮನಗೌಡ ಸರದೇಸಾಯಿ | 1941–1946 |
| ಲೋಕೂರ ನಾರಾಯಣರಾವ್ ಸ್ವಾಮಿರಾವ್ | 1947 |
| ತಿರುಮಲೆ ತಾತಾಚಾರ್ಯ ಶರ್ಮ | 1947–1949 |
| ರೆವರೆಂಡ್ ಉತ್ತಂಗಿ ಚೆನ್ನಪ್ಪ | 1949–1950 |
| ಎಂ.ಆರ್. ಶ್ರೀನಿವಾಸ್‌ಮೂರ್ತಿ | 1950–1953 |
| ಮಾಸ್ತಿ ವೆಂಕಟೇಶ ಅಯ್ಯಂಗಾರ್ | 1953–1954 |
| ಬಿ. ಶಿವಮೂರ್ತಿಶಾಸ್ತ್ರಿ | 1954–1956 |
| ಜಿ. ವೆಂಕಟಸುಬ್ಬಯ್ಯ | 1956–1964 |

| | |
|---|---|
| ಜಿ. ನಾರಾಯಣ | 1964–1978 |
| ಹಂಪ ನಾಗರಾಜಯ್ಯ | 1978–1986 |
| ಎಚ್.ಬಿ. ಜ್ವಾಲನಯ್ಯ | 1986–1987 |
| ಜಿ.ಎಸ್. ಸಿದ್ಧಲಿಂಗಯ್ಯ | 1989–1992 |
| ಗೊ.ರು. ಚೆನ್ನಬಸಪ್ಪ | 1992–1995 |
| ಸಾ.ಶಿ. ಮರುಳಯ್ಯ | 1995–1998 |
| ಎನ್. ಬಸವಾರಾಧ್ಯ | 1998–2001 |
| ಹರಿಕೃಷ್ಣ ಪುನರೂರು | 2001–2004 |
| ಚಂದ್ರಶೇಖರ ಪಾಟೀಲ | 2004–2008 |
| ಆರ್.ಕೆ. ನಲ್ಲೂರು ಪ್ರಸಾದ್ | 2008–2012 |
| ಪುಂಡಲೀಕ ಹಾಲಂಬಿ | 2012– |

ಪರಿಷತ್ತಿನ ಪ್ರತಿಯೋರ್ವ ಅಧ್ಯಕ್ಷರು ತಮ್ಮ ಅವಧಿಯಲ್ಲಿ ಸಾಧಿಸಿದುದನ್ನು ಪ್ರತ್ಯೇಕವಾಗಿ ಹಾಗೂ ವಿವರವಾಗಿ ದಾಖಲಿಸಬೇಕಾಗಿದೆ; ವಸ್ತುನಿಷ್ಠ ವಿಶ್ಲೇಷಣೆಗೂ ಒಳಪಡಿಸಬೇಕಿದೆ.

**ನಿಘಂಟುಗಳ ಪ್ರಕಟಣೆ:**

ಕನ್ನಡ ಸಾಹಿತ್ಯ ಪರಿಷತ್ತಿನ ಸಾಧನೆಗಳಲ್ಲಿ ಕನ್ನಡ ನಿಘಂಟುಗಳ ಪ್ರಕಟಣೆಯದೇ ದೊಡ್ಡ ಪಾಲು. ಪರಿಷತ್ತಿಗೆ ಶಾಶ್ವತವಾದ ಕೀರ್ತಿಯನ್ನು ತಂದುಕೊಟ್ಟಿರುವ ಯೋಜನೆಗಳಲ್ಲಿ ಈ ನಿಘಂಟು ಯೋಜನೆ ಪ್ರಮುಖವಾದುದು ಮಾತ್ರವಲ್ಲ, ಪರಿಷತ್ತಿನ ಇತಿಹಾಸದಲ್ಲೂ ಇದೊಂದು ಮೈಲುಗಲ್ಲೆಂಬ ಕೀರ್ತಿಯೂ ಇದಕ್ಕೆ ಸಂದಿದೆ. ಪರಿಷತ್ತಿನ ಸ್ಥಾಪನೆಯ ದಿನದಿಂದಲೇ ಕನ್ನಡಕ್ಕೆ ಆಕರವಾದ ಆಧಾರಪೂರ್ಣವಾದ ಸಮಗ್ರ ನಿಘಂಟು ರಚನೆ ಹಾಗೂ ಪ್ರಕಟಣೆಯನ್ನು ಕೈಗೆತ್ತಿಕೊಳ್ಳಬೇಕೆಂಬ ಉದ್ದೇಶವನ್ನು ಹೊಂದಲಾಗಿದ್ದಿತು. ಭಾಷಾಶಾಸ್ತ್ರ ನಿಯಮಗಳಿಗನುಸಾರವಾದ ಚಾರಿತ್ರಿಕ ವಿವರಣೆಯಿಂದ ಕೂಡಿದ ಪ್ರಮಾಣಭೂತವೂ ಸಮಗ್ರವೂ ಆದ ಕನ್ನಡ ನಿಘಂಟು ಸಿದ್ಧಪಡಿಸುವ ನಿಟ್ಟಿನಲ್ಲಿ ಪರಿಷತ್ತು ಪ್ರಯತ್ನ ವನ್ನಾರಂಭಿಸಿತು.

1919 ರಿಂದ 1930ರ ವರೆಗೆ ಪರಿಷತ್ತಿನಲ್ಲಿ ನಡೆದ ನಿಘಂಟು ಸಂಬಂಧಿ ಕಾರ್ಯಗಳು ಮೌಲಿಕವಾದುದಷ್ಟೇ ಅಲ್ಲ, ಮುಂದೆ ಸಿದ್ಧಪಡಿಸಬೇಕಾದ ನಿಘಂಟುಗಳ ಬಗೆಗೂ ಭರವಸೆ ಮೂಡಿಸಿದವು. 1919 ಜುಲೈ 27ರಂದು ಸಭೆ ಸೇರಿದ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯಲ್ಲಿ ತೆಗೆದುಕೊಂಡ ತೀರ್ಮಾನದಂತೆ, ಅಂತಿಮವಾಗಿ 'ಷಟ್ಪದಿಕಾವ್ಯಗಳ ಕನ್ನಡ-ಕನ್ನಡ ನಿಘಂಟು' ಸಹಾ ಸಿದ್ಧಗೊಂಡಿತು. ಇದು ಹಸ್ತಪ್ರತಿರೂಪದಲ್ಲಿಯೇ ಇರುವಂಥಾದ್ದು. ಆ ನಂತರ ಕನ್ನಡದ ಪ್ರಾಚೀನ ನಿಘಂಟುಗಳನ್ನು ಉಪಯೋಗಿಸಿಕೊಂಡು 'ನಿಘಂಟುಗಳ ನಿಘಂಟು' ಸಹಾ ಸಿದ್ಧಗೊಂಡಿತು. 1941 ಡಿಸೆಂಬರ್‌ನಲ್ಲಿ ಹೈದರಾಬಾದಿನಲ್ಲಿ ಸಮಾವೇಶಗೊಂಡ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಕನ್ನಡ ನಿಘಂಟಿನ ಕಾರ್ಯವನ್ನಾರಂಭಿಸುವ ನಿರ್ಣಯ ಕೈಗೊಳ್ಳಲಾಯಿತು; ಹಾಗೂ ಸಂಪಾದಕ ಸಮಿತಿಯೊಂದನ್ನು ನೇಮಿಸಲಾಯಿತು. 1943 ಡಿಸೆಂಬರ್ 18ರಂದು ನಡೆದ ಈ ಸಂಪಾದಕ

ಮಂಡಲಿಯ ಪ್ರಥಮ ಸಭೆಯಲ್ಲಿ ಒಂದು ಸಮಾಲೋಚನ ಸಮಿತಿಯನ್ನೂ ಅದಕ್ಕೆ ಸಹಾಯ ಮಾಡಲು ಒಂದು ಸಹಾಯಕ ಸಮಿತಿಯನ್ನು ರಚಿಸಲಾಯಿತು. ಈ ಹಿನ್ನೆಲೆಯಲ್ಲಿ, 1944 ಜನವರಿ 27ರಂದು ಪರಿಷತ್ತಿನಲ್ಲಿ ನಿಘಂಟು ಕಚೇರಿ ಸ್ಥಾಪನೆಗೊಳ್ಳುವುದರೊಡನೆ ಅಧಿಕೃತವಾಗಿ ನಿಘಂಟು ಕಾರ್ಯ ಆರಂಭಗೊಂಡಿತು. ಒಟ್ಟು 76 ಜನ ಪಂಡಿತ ತಂಡದಿಂದ ಆರಂಭಗೊಂಡುದು ಈ ಕಾರ್ಯವೆಂಬ ಸೂಚನೆ ದೊರೆಯುತ್ತದೆ. ಇಂಥಾ ಪ್ರಯತ್ನ ಇತರ ಭಾರತೀಯ ಭಾಷೆಗಳಲ್ಲಿ ಆಗಿಲ್ಲವೆಂದು ಹೇಳಲಾಗುತ್ತದೆ.

ಕನ್ನಡ–ಕನ್ನಡ ಬೃಹತ್ ನಿಘಂಟುಗಳ ಯೋಜನೆ ಪೂರ್ಣಗೊಳ್ಳಲು ತೆಗೆದುಕೊಂಡ ಕಾಲಾವಧಿ ಅರ್ಧ ಶತಮಾನ 1944 ರಿಂದ 1995ರವರೆಗೆ. 1ನೆಯ ಸಂಪುಟವು 1970ರಲ್ಲಿ; 2ನೆಯದು 1976ರಲ್ಲಿ, 3ನೆಯದು 1977ರಲ್ಲಿ; 4ನೆಯದು 1979ರಲ್ಲಿ; 5ನೆಯದು 1988ರಲ್ಲಿ, 6ನೆಯದು 1990ರಲ್ಲಿ, 7ನೆಯದು 1993ರಲ್ಲಿ; 8ನೆಯ ಹಾಗೂ ಕೊನೆಯ ಸಂಪುಟವು 1995ರಲ್ಲಿ ಬಿಡುಗಡೆಗೊಂಡವು. 10,000ಕ್ಕೂ ಹೆಚ್ಚು ಪುಟಗಳನ್ನು ಒಳಗೊಂಡಿರುವ ಈ ಮಹಾನ್ ಸಂಪುಟಗಳ ಪ್ರಧಾನ ಸಂಪಾದಕರುಗಳಾಗಿ ಕಾರ್ಯನಿರ್ವಹಿಸದವರು ಶ್ರೀ ಎನ್. ಬಸವಾರಾಧ್ಯ ಮತ್ತು ಪ್ರೊ. ಜಿ. ವೆಂಕಟಸುಬ್ಬಯ್ಯ. ಈ ಎಲ್ಲ ಎಂಟು ಸಂಪುಟಗಳು 2010ರಲ್ಲಿ ಪುನರ್‌ಮುದ್ರಣಗೊಂಡವು.

ಕನ್ನಡ–ಕನ್ನಡ ಬೃಹತ್ ನಿಘಂಟು ಯೋಜನೆಯೊಡನೆ ಇತರ ಜನೋಪಯೋಗಿ ನಿಘಂಟಗಳನ್ನು ಪರಿಷತ್ತು ಹೊರತಂದಿತು. 1975ರಲ್ಲಿ ಪ್ರಕಟಗೊಂಡ 'ಸಂಕ್ಷಿಪ್ತ ಕನ್ನಡ ನಿಘಂಟು' ಮೊದಲನೇ ಮುದ್ರಣದಲ್ಲೇ 50,000 ಪ್ರತಿಗಳ ಭಾಗ್ಯ ಕಂಡಿತು. ಹತ್ತಿರ ಹತ್ತಿರ 1,000 ಪುಟಗಳ ಹಾಗೂ 1 ಲಕ್ಷ ಶಬ್ದಗಳುಳ್ಳ ಈ ನಿಘಂಟುವಿನ ಆರಂಭದ ಬೆಲೆ ಕೇವಲ 5 ರೂಪಾಯಿಗಳು. 1977ರಲ್ಲಿ ಕಿಸೆ ನಿಘಂಟು ರೂಪದಲ್ಲಿ ಹೊರಬಂದ 'ಕನ್ನಡ ರತ್ನಕೋಶ'ವು ಇನ್ನೊಂದು ವಿಕ್ರಮವನ್ನು ಸಾಧಿಸಿತು. ಇದು ಪ್ರಕಟಗೊಂಡುದು 1977ರಲ್ಲಿ ಆಚರಿಸಲಾದ ಪರಿಷತ್ತಿನ ಅಮೃತ ಮಹೋತ್ಸವದ ಅಂಗವಾಗಿ. ಮೊದಲನೇ ಮುದ್ರಣದಲ್ಲಿಯೇ ಇದರ 2 ಲಕ್ಷ ಪ್ರತಿಗಳು ಕನ್ನಡಿಗರ ಕೈ ಸೇರಿದವು. ಒಟ್ಟು 365 ಪುಟಗಳ ಈ ಕೋಶವನ್ನು ಕೇವಲ 2 ರೂಪಾಯಿಗಳಿಗೆ ವಿತರಿಸಲಾಯಿತು. ಹಾಗೆಯೇ, ಜಿ–ಬಿ ನಿಘಂಟು, ಪಡೆನುಡಿಕೋಶ, ಸಂಕ್ಷಿಪ್ತ ಕನ್ನಡ–ಇಂಗ್ಲಿಷ್ ನಿಘಂಟು(2006)ಗಳೂ ಹೊರಬೀಳುವುದರೊಡನೆ ಕನ್ನಡಿಗರಿಗೆ ಮಹದೋಪಕಾರ ಮಾಡಿವೆ. ಭಾಷೆ ಮತ್ತು ರತ್ನಕೋಶದಂಥಾ ಇತರ ಒಂದೆರಡೂ ಕೋಶಗಳೂ ಅಚ್ಚುಕಂಡಿವೆ. ಈಗ ಪರಿಷತ್ತು 'ದ್ರಾವಿಡ ಭಾಷಾ ಜ್ಞಾತಿಪದಕೋಶ'ವನ್ನು ಬಿಡುಗಡೆಗೊಳಿಸಿದೆ.

**ಪರಿಷತ್ತಿನ ಪತ್ರಿಕೆಗಳು ಮತ್ತು ಪುಸ್ತಕಗಳು:**

ಪರಿಷತ್ತು ಪ್ರಕಟಿಸುತ್ತಾ ಬಂದಿರುವ ಎರಡು ಪ್ರಮುಖ ಮುಖಪತ್ರಗಳೆಂದರೆ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ' ಮತ್ತು 'ಕನ್ನಡನುಡಿ.' ದಾಖಲೀಕರಣದ ದೃಷ್ಟಿಯಿಂದ, ಇವು ಒದಗಿಸುವ ಕನ್ನಡ ನಾಡು–ನುಡಿಗಳಿಗೆ ಸಂಬಂಧಿಸಿದ ಮುಖ್ಯ ಘಟನೆಗಳು, ನಿರ್ಣಯಗಳು, ಸಾಧನೆ ಮೊದಲಾದವುಗಳ ಅಧಿಕೃತ ಮಾಹಿತಿ ಅಮೂಲ್ಯವಾದುದು; ಆಕರ ಸ್ವರೂಪವಾದ್ದು. 1916 ಏಪ್ರಿಲ್‌ನಿಂದ ತನ್ನ ಪ್ರಕಟಣೆಯನ್ನಾರಂಭಿಸಿದ 'ಕರ್ನಾಟಕ

ಸಾಹಿತ್ಯ ಪರಿಷತ್ ಪತ್ರಿಕೆ'ಯು 1938ರಲ್ಲಿ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯಾಗಿ ಬದಲಾಯಿತು. ಇದು ಆರಂಭದಲ್ಲಿ ತ್ರೈಮಾಸಿಕವಾಗಿದ್ದುದು ಆ ನಂತರ 1941ರಲ್ಲಿ ಮತ್ತೆ ಷಾಣ್ಮಾಸಿಕವಾಯಿತಲ್ಲದೆ, 2001ರಿಂದ ಮೊದಲಿನಂತೆ ತ್ರೈ ಮಾಸಿಕವಾಗಿಯೇ ಹೊರಬರುತ್ತಿದೆ. ವಿದ್ವತ್‌ಪ್ರಪಂಚ, ಸಂಶೋಧನೆ ಮತ್ತು ವಿಮರ್ಶಕ ಕ್ಷೇತ್ರಗಳಿಗೆ ಈ ಪತ್ರಿಕೆಯಿಂದ ಆಗುತ್ತಿರುವ ಉಪಕಾರ ಎಣೆಯಿಲ್ಲದ್ದು.

ಕನ್ನಡ ಚಟುವಟಿಕೆಗಳಿಗೆ ಮೀಸಲಾದ ಪತ್ರಿಕೆಯೆಂತಲೇ ಗುರುತಿಸಲ್ಪಟ್ಟುದು 'ಕನ್ನಡನುಡಿ'. ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಬಿ.ಎಂ.ಶ್ರೀಕಂಠಯ್ಯ ಅವರಿಂದ (1938-1942) 1938 ಅಕ್ಟೋಬರ್ 4 ವಿಜಯ ದಶಮಿಯಂದು ಆರಂಭಗೊಂಡುದು ಈ ಪತ್ರಿಕೆ. ಮೊದಲಿಗೆ ವಾರಪತ್ರಿಕೆಯಾಗಿದ್ದುದು ಆ ನಂತರ ಮಾಸ ಪತ್ರಿಕೆಯಾಯಿತು. 1949 ನವೆಂಬರ್‌ನಿಂದ ಪಕ್ಷಪತ್ರಿಕೆಯಾಗಿ, 1950 ಆಗಸ್ಟ್‌ನಿಂದ ಮಾಸ ಪತ್ರಿಕೆಯಾಯಿತು. ಇದು ಮತ್ತೊಮ್ಮೆ ಪಕ್ಷಪತ್ರಿಕೆಯಾದುದು 1969 ನವೆಂಬರ್‌ನಿಂದ. 1991 ರಿಂದ ಇದು ಮತ್ತೆ ಮಾಸ ಪತ್ರಿಕೆಯಾಗಿ ಮುಂದುವರೆದಿದೆ (ಪ್ರಸ್ತುತ 'ಕನ್ನಡ ನುಡಿ' ಕಾರಣಾಂತರಗಳಿಂದ ಮಾಸ ಪತ್ರಿಕೆಯಾಗಿ ಉಳಿದಿಲ್ಲ -ಸಂ.). 'ಕಾದಂಬರಿ ಸಾರ್ವಭೌಮ' ಅ.ನ.ಕೃಷ್ಣರಾಯರು ಈ ಪತ್ರಿಕೆಯ ಮೊದಲ ಸಂಪಾದಕರು.

ಹಿರಿಯ ಸಂಶೋಧಕರು, ಸಾಹಿತಿಗಳು ಹಾಗೂ ವಿಮರ್ಶಕರ ಮೌಲಿಕ ಬರಹಗಳು 'ಕನ್ನಡನುಡಿ' ಮೂಲಕ ಬೆಳಕುಕಂಡು ಕನ್ನಡ ಭಾಷೆ-ಸಾಹಿತ್ಯ ಕ್ಷೇತ್ರಗಳಿಗೆ ಅಪಾರ ನೆರವು ನೀಡಿವೆ; ಅಭ್ಯಾಸಿಗಳಿಗೆ ಮಾರ್ಗದರ್ಶನ ಮಾಡಿವೆ. ಸಾಹಿತ್ಯಾಸಕ್ತರ ಪಾಲಿಗೆ ಮಾಹಿತಿಕೋಶದಂತಿರುವ 'ಕನ್ನಡನುಡಿ'ಯು ಇಂದಿಗೂ ತನ್ನ ತಾಜಾತನವನ್ನು ಉಳಿಸಿಕೊಂಡು ಬಂದಿರುವುದು ವಿಶೇಷ. ಕಾಲಕಾಲಕ್ಕೆ ಈ ಪತ್ರಿಕೆಯು ವಿಶೇಷಾಂಕಗಳು ಬೆಳಕುಕಂಡಿದ್ದು, ವಿಶೇಷ ಸಂದರ್ಭಗಳಿಗೆ ಸಾಕ್ಷಿಯಂತಿವೆ; ಪ್ರಖ್ಯಾತರ ನೆನಪುಗಳನ್ನು ದಾಖಲಿಸಿಕೊಂಡು ಎಲ್ಲರಿಗೂ ಸ್ಫೂರ್ತಿದಾಯಕವಾಗಿವೆ. 'ಕನ್ನಡನುಡಿ' ಕೇವಲ ಕನ್ನಡ ಸಾಹಿತ್ಯ ಪರಿಷತ್ತಿನ ಮುಖಪತ್ರ ಮಾತ್ರವೇ ಅಲ್ಲ, ಸಮಗ್ರ ಕನ್ನಡ ನಾಡಿನ ಮುಖವಾಣಿಯೂ ಹೌದು.

ಪುಸ್ತಕಗಳ ಪ್ರಕಟಣೆಯ ಮಟ್ಟಿಗಂತೂ ಪರಿಷತ್ತಿನದು ಕ್ರಾಂತಿಕಾರಕ ಹೆಜ್ಜೆ. ಈ ಸಂಸ್ಥೆ ಈವರೆಗೆ ಹೊರತಂದಿರುವ ಪುಸ್ತಕಗಳ ಸಂಖ್ಯೆ 1500ಕ್ಕೂ ಹೆಚ್ಚು. ಕನ್ನಡದ ಎಲ್ಲ ಪ್ರಕಾರಗಳ ಪುಸ್ತಕಗಳು ಇದರಲ್ಲಿ ಸೇರಿವೆ. ಕನ್ನಡ ಗದ್ಯಾನುವಾದಮಾಲೆ, ಅಮೃತೋತ್ಸವ ಮಾಲೆ, ಜೆಳ್ಳಿಜಿಟ್ಟ ಬಳ್ಳಿಮಾಲೆ, ಮಹಿಳಾ ಮಾಲಿಕೆ, ನವಸಾಕ್ಷರ ಮಾಲೆ, ಜೀವನಚರಿತ್ರೆಗಳು, ಸಾಹಿತ್ಯ ಸಮ್ಮೇಳನ ಸಂಪುಟಗಳು, ವಿಚಾರ ಸಂಕಿರಣ ಸಂಪುಟಗಳು, ಸಮ್ಮೇಳನಾಧ್ಯಕ್ಷರುಗಳ ಭಾಷಣಗಳು, ಕತೆ-ನಾಟಕ-ಹಾಸ್ಯ-ಮಕ್ಕಳ ಸಾಹಿತ್ಯ, ಸಂಗೀತ-ಗಮಕ-ವಿಜ್ಞಾನ-ಆರೋಗ್ಯ ಇನ್ನಿತರ ಸಂಕೀರ್ಣಕೃತಿಗಳು – ಹೀಗೆ ಪಟ್ಟಿ ಬೆಳೆಯುತ್ತದೆ. ಶಾಸ್ತ್ರ ಗ್ರಂಥಗಳು, ಪ್ರಾಚೀನ ಕಾವ್ಯಕೃತಿಗಳು, ಶಾಸನ ಸಂಗ್ರಹಗಳು ಮೊದಲಾದವು ಪರಿಷತ್ತಿನ ಆರಂಭ ಕಾಲದಿಂದಲೂ ಪ್ರಕಟಗೊಳ್ಳುತ್ತಾ ಬಂದಿವೆ. ಕನ್ನಡ ಬಾವುಟ, ಕರ್ಣಾಟಕ ಕವಿಚರಿತೆ, ಕನ್ನಡ ನಾಡಿನ ಚರಿತ್ರೆ, ಕನ್ನಡ ಜಾನಪದ ವಿಶ್ವಕೋಶ, ಮಹಾಪುರಾಣ, ಕರ್ಣಾಟಕ ಭಾರತ ಜನಪ್ರಿಯ ಗ್ರಂಥಗಳನ್ನು ಪರಿಷತ್ತು ಪ್ರಕಟಿಸಿದೆ.

**ಕನ್ನಡ ಸಾಹಿತ್ಯ ಸಮ್ಮೇಳನಗಳು:**

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳು ನಾಡವರಲ್ಲಿ ಭಾವೈಕ್ಯತೆಯನ್ನುಂಟು ಮಾಡುವಲ್ಲಿ ಯಶಸ್ವಿಯಾಗಿವೆ. ಸಾಹಿತ್ಯ ಸಮ್ಮೇಳನಗಳೆಂದರೆ ಅವು ಕನ್ನಡನಾಡಿನ ಸಾಹಿತ್ಯೋತ್ಸವಗಳೆಂಬುದು ವಾಸ್ತವ. ಈವರೆಗೆ ಜರುಗಿರುವ 80 ಸಮ್ಮೇಳನಗಳು ಈ ಅಂಶವನ್ನು ಸಮರ್ಥಿಸಿವೆ. ಕರ್ನಾಟಕ-ಕನ್ನಡಗಳ ಬಗೆಗೆ ಸಮಗ್ರವಾಗಿ ಚರ್ಚಿಸಲು ಈ ಸಮ್ಮೇಳನಗಳು ಒದಗಿಸುವ ವೇದಿಕೆ ಕುರಿತು ಎಷ್ಟು ಬಗೆಯಲ್ಲಿ ವರ್ಣಿಸಿದರೂ ಕಡಿಮೆಯೇ! ಜನಜಾಗೃತಿಯ ಮಟ್ಟಿಗೆ ಅತ್ಯಂತ ಪರಿಣಾಮಕಾರಿಯಾಗಿರುವಂಥವು ಈ ಸಮ್ಮೇಳನಗಳು. ಮೊದಲಿಗೆ 'ಕನ್ನಡ ಸಾಹಿತ್ಯ ಸಮ್ಮೇಳನ'ವೆಂದಿದ್ದು, ಇದನ್ನು 1976ರಲ್ಲಿ ಶಿವಮೊಗ್ಗದಲ್ಲಿ ನಡೆದ 49ನೇ ಸಮ್ಮೇಳನದಿಂದ 'ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ'ವೆಂದು ಕರೆಯಲಾಯಿತು.

1915 ಮೇ 3 ರಿಂದ 6ರವರೆಗೆ ನಾಲ್ಕು ದಿನಗಳ ಕಾಲ ಎಚ್.ವಿ. ನಂಜುಂಡಯ್ಯ ಅವರ ಅಧ್ಯಕ್ಷತೆಯಲ್ಲಿ ಬೆಂಗಳೂರಿನಲ್ಲಿ ಏರ್ಪಟ್ಟ ಸಮ್ಮೇಳನವೇ ಮೊದಲನೇ ಸಾಹಿತ್ಯ ಸಮ್ಮೇಳನ. ಇನ್ನು 80ನೇ ಸಾಹಿತ್ಯ ಸಮ್ಮೇಳನವು 2014ರಲ್ಲಿ ಜನವರಿ 7 ರಿಂದ 9ರವರೆಗೆ ಜರುಗಿದ್ದು ಮಡಿಕೇರಿಯಲ್ಲಿ; ನಾಡೋಜ ನಾ. ಡಿಸೋಜಾ ಅವರ ಅಧ್ಯಕ್ಷತೆಯಲ್ಲಿ. ಇದು ಈ ಜಿಲ್ಲಾ ಕೇಂದ್ರದಲ್ಲಿ 3ನೇ ಬಾರಿಗೆ ನಡೆದಂಥಾ ಸಮ್ಮೇಳನ. ಸಾಮಾನ್ಯವಾಗಿ, ಕರ್ನಾಟಕದ ಎಲ್ಲಾ ಪ್ರಮುಖ ಸ್ಥಳಗಳಲ್ಲೂ ಸಾಹಿತ್ಯ ಸಮ್ಮೇಳನಗಳು ನಡೆದಿವೆ. ಮುಂಬಯಿ, ಹೈದರಾಬಾದ್, ಚೆನ್ನೈ, ಕಾಸರಗೋಡು, ಸೊಲ್ಲಾಪುರ, ನವದೆಹಲಿಗಳಲ್ಲೂ ಈ ಸಮ್ಮೇಳನಗಳು ಏರ್ಪಟ್ಟಿವೆ. ಇನ್ನು ನಮ್ಮ ರಾಜ್ಯದೊಳಗೇ ಜಿಲ್ಲಾ ಮತ್ತು ತಾಲ್ಲೂಕು ಸಾಹಿತ್ಯ ಸಮ್ಮೇಳನಗಳ ಸಂಭ್ರಮವಂತೂ ಹೇಳತೀರದು. ಕೆಲವೆಡೆಗಳಲ್ಲಿ ಹೋಬಳಿ ಮತ್ತು ಗ್ರಾಮಗಳ ಮಟ್ಟದಲ್ಲೂ ಸಾಹಿತ್ಯ ಸಮಾವೇಶ ಸ್ವರೂಪದ ಕಾರ್ಯಕ್ರಮಗಳು ನಡೆದಿರುವುದುಂಟು. ಗಡಿನಾಡು ಸಾಹಿತ್ಯ ಸಮ್ಮೇಳನಗಳು ದ್ವಿಭಾಷಿಕ ಪ್ರದೇಶಗಳಲ್ಲಿಯ ಜನರನ್ನು ಭಾವನಾತ್ಮಕವಾಗಿ ಬೆಸೆಯುವಲ್ಲಿ ಸಹಕಾರಿಯೆನಿಸಿವೆ. ಕಾಲಕಾಲಕ್ಕೆ ಎಲ್ಲ ವರ್ಗಗಳವರು ಮತ್ತು ಭಾಷೆಗಳವರು ಇಂಥಾ ಸಾಹಿತ್ಯಿಕ-ಸಾಂಸ್ಕೃತಿಕ ಸಂಭ್ರಮಾಚರಣೆಗಳಲ್ಲಿ ಭಾಗವಹಿಸುತ್ತಿರುವುದು; ಸಮಗ್ರ ಜನಮನ ಸೂರೆಗೊಳ್ಳುವಂಥಾದ್ದು.

ಸಾಮಾನ್ಯವಾಗಿ ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳು ಸ್ವೀಕರಿಸುವ ನಿರ್ಣಯಗಳು ಕನ್ನಡನಾಡು-ನುಡಿ ಬಗೆಗಿನ ಕಾಳಜಿಗಳ ಹಿನ್ನೆಲೆಯಲ್ಲಿ ಅಂಗೀಕರಿಸಲ್ಪಡುವಂಥವು. ಇಂಥಾ ನಿರ್ಣಯಗಳಲ್ಲಿ ಕೆಲವಾದರೂ ಸರ್ಕಾರಗಳ ಗಮನ ಸೆಳದು ನಾಡು-ನುಡಿಗಳ ಸುಧಾರಣೆ ಕೈಗೊಳ್ಳುವ ನಿಟ್ಟಿನಲ್ಲಿ ಪರಿಣಾಮಕಾರಿಯೆನಿಸಿವೆ.

**ಪರಿಷತ್ತಿನ ಮಹೋತ್ಸವಗಳು:**

ಕನ್ನಡ ಸಾಹಿತ್ಯ ಪರಿಷತ್ತು ತನ್ನ ಬೆಳ್ಳಿಹಬ್ಬವನ್ನಾಚರಿಸಿದುದು 1940ರಲ್ಲಿ. ಜೂನ್ 30 ಮತ್ತು ಜುಲೈ 1ರಂದು ನಡೆದ ಈ ಉತ್ಸವವು ಸಮಾವೇಶಗೊಂಡುದು ಬೆಂಗಳೂರು ಪುರಭವನದಲ್ಲಿ. ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಇದನ್ನು ಉದ್ಘಾಟಿಸಿದರು. ಪರಿಷದಧ್ಯಕ್ಷರೂ ಆಗಿದ್ದ ಯುವರಾಜ ಜಯಚಾಮರಾಜ ಒಡೆಯರ್ ಅವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಆ ನಂತರ ಪರಿಷತ್ತಿನ ಸುವರ್ಣ

ಮಹೋತ್ಸವ ನಡೆದುದು 1970 ಡಿಸೆಂಬರ್ 26ರಂದು. ಇದು ಆಚರಣೆಗೊಂಡುದು ಕೋಟೆ ಪ್ರೌಢಶಾಲೆಯ ಆವರಣದಲ್ಲಿ. ಸುವರ್ಣ ಮಹೋತ್ಸವ ಕಟ್ಟಡದ ಶಂಕುಸ್ಥಾಪನೆ ಯಾದುದು ಮತ್ತು 'ಚಿನ್ನದ ಬೆಳಸು' ಎಂಬ ಉತ್ಕೃಷ್ಟ ಸ್ಮರಣ ಸಂಪುಟ ಪ್ರಕಟಗೊಂಡುದು ಇದೇ ಸಂದರ್ಭದಲ್ಲಿ. ಸುವರ್ಣ ಮಹೋತ್ಸವ ಕಟ್ಟಡವು 1973ರಲ್ಲಿ ಪೂರ್ಣಗೊಂಡಿತು.

ಆ ನಂತರ ಇನ್ನೆರಡು ಮಹತ್ವದ ಮಹೋತ್ಸವಗಳು ಪರಿಷತ್ತಿನಲ್ಲಿ ಜರುಗಿದವು. 1977 ಏಪ್ರಿಲ್ 23 ರಿಂದ 28ರವರೆಗೆ ಒಟ್ಟು ಆರುದಿನಗಳ ಕಾಲ ವಜ್ರಮಹೋತ್ಸವವು ನಡೆದು ಹಲವು ಉಪಯುಕ್ತ ಕಾರ್ಯಕ್ರಮಗಳಿಗೆ ಸಾಕ್ಷಿಯಾಯಿತು. 1981ರಲ್ಲಿ ವಜ್ರಮಹೋತ್ಸವ ಕಟ್ಟಡವನ್ನು ಪೂರ್ಣಗೊಳಿಸಲಾಯಿತು. 1985 ಮೇ 19ರಂದು ಪರಿಷತ್ತಿಗೆ 70 ವರುಷಗಳು ತುಂಬಿದ ಸ್ಮರಣೆಗೆ ಅಮೃತೋತ್ಸವವನ್ನು ಆಚರಿಸಲಾಯಿತು. ಇದರ ಅಂಗವಾಗಿ 'ಅಮೃತಶ್ರೀ' ಸ್ಮರಣಸಂಚಿಕೆ ಪ್ರಕಟಗೊಂಡಿತು. ಇದೀಗ 100ನೇ ವರ್ಷಾಚರಣೆಯ ಸಂಭ್ರಮದಲ್ಲಿರುವ ಪರಿಷತ್ತು ಶತಮಾನೋತ್ಸವ ಭವನವನ್ನು ನಿರ್ಮಿಸುತ್ತಿದೆ.

**ಪರಿಷತ್ತಿನ ಇತರ ಸಾಧನೆಗಳು:**

1. ಕರ್ನಾಟಕ ರಾಜಕೀಯ ಏಕೀಕರಣಕ್ಕೆ ಪರಿಷತ್ತಿನ ಪ್ರಯತ್ನವನ್ನು ಇತಿಹಾಸ ಗುರುತಿಸಿದೆ. ಕರ್ನಾಟಕದ ಭೌಗೋಳಿಕ ಎಲ್ಲೆಗಳನ್ನು ಗುರುತಿಸುವ ನಿಟ್ಟಿನಲ್ಲಿ ಆರಂಭದಿಂದಲೂ ಪ್ರಯತ್ನಗಳು ನಡೆದುದು ವಾಸ್ತವ. ಈ ಸಂಬಂಧದಲ್ಲಿ ಬಿ.ಎಂ. ಶ್ರೀಕಂಠಯ್ಯ ಅವರ ದೂರದೃಷ್ಟಿ, ಪರಿಶ್ರಮ ಮುಂತಾದವು ಗಮನಾರ್ಹವಾದುವು. ಅವರ ನಂತರ ಪರಿಷತ್ತಿನ ಗದ್ದುಗೆ ಏರಿದ ಇತರ ಮಹನೀಯರೂ ಈ ಮಟ್ಟಿಗೆ ತಮ್ಮದೇ ಕೊಡುಗೆಗಳನ್ನಿತ್ತಿದ್ದಾರೆ. ಮುಖ್ಯವಾಗಿ, ಪರಿಷತ್ತಿನ ಸಾಹಿತ್ಯ ಸಮ್ಮೇಳನಗಳು ಕರ್ನಾಟಕ ಏಕೀಕರಣದ ಪ್ರಯತ್ನಕ್ಕೆ ಬೆಂಬಲವಾಗಿ ನಿಂತವು. 1947ರಲ್ಲಿ ಸ್ವಾತಂತ್ರ್ಯ ಪಡೆದನಂತರ ಸಮ್ಮೇಳನಗಳ ಅಧ್ಯಕ್ಷರುಗಳು ಏಕೀಕರಣದ ಅನಿವಾರ್ಯತೆಯನ್ನು ಕಂಡು ತೀವ್ರವಾಗಿ ಪ್ರತಿಕ್ರಿಯಿಸಿದರು. ಏಕೀಕರಣದಿಂದಲೇ ರಾಜಕೀಯ ಏಕೀಕರಣ ಸಾಧ್ಯವೆಂಬುದನ್ನು ಇವರೆಲ್ಲರೂ ಸಾರಿ ಹೇಳುತ್ತಾ ಬಂದರು. 1950ರಲ್ಲಿ ಸೊಲ್ಲಾಪುರದಲ್ಲಿ ನಡೆದ 33ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ (ಅಧ್ಯಕ್ಷರು:ಎಂಆರ್‌ಶ್ರೀ) ಮೊತ್ತಮೊದಲು ಈ ಮುಂದಿನಂತೆ ಸ್ಪಷ್ಟ ನಿರ್ಣಯ ತೆಗೆದುಕೊಂಡಿತು: "ಭಾಷಾವಾರು ಪ್ರಾಂತರಚನೆಯ ತತ್ವಕ್ಕೆ ಅನುಗುಣವಾಗಿ ಮೈಸೂರನ್ನೊಳಗೊಂಡ ಕರ್ನಾಟಕ ಪ್ರಾಂತ ರಚನೆಯನ್ನು ಆದಷ್ಟು ಬೇಗನೆ ಮಾಡಬೇಕೆಂದು ಕೇಂದ್ರ ಸರ್ಕಾರವನ್ನು ಈ ಸಮ್ಮೇಳನ ಪ್ರಾರ್ಥಿಸುತ್ತದೆ"[5] ಈ ಪ್ರಯತ್ನವು ಹಲವಾರು ಹಂತಗಳಲ್ಲಿ, ಸ್ವರೂಪಗಳಲ್ಲಿ ಬೆಳವಣಿಗೆ ಹೊಂದಿ 1956 ನವೆಂಬರ್ 1ರಂದು ಕನ್ನಡ ಮಾತನಾಡುವ ಪ್ರದೇಶಗಳು ಒಂದುಗೂಡಿ 'ಮೈಸೂರು ರಾಜ್ಯ'ವಾಯಿತು. ಪರಿಷತ್ತಿನ ಮುಂದುವರೆದ ಪ್ರಯತ್ನಗಳಿಂದ 1973 ನವೆಂಬರ್ 1ರಂದು ಈ ರಾಜ್ಯಕ್ಕೆ ಅಧಿಕೃತವಾಗಿ 'ಕರ್ನಾಟಕ' ಎಂದು ನಾಮಕರಣ ಮಾಡಲಾಯಿತು.

1956ರಲ್ಲಿ, ಕನ್ನಡ ನಾಡು ಒಂದುಗೂಡಿದ ಐತಿಹಾಸಿಕ ಸಂದರ್ಭದಲ್ಲಿ, ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ. ಎಸ್. ನಿಜಲಿಂಗಪ್ಪ ಅವರು ಆಡಿದ ಮಾತುಗಳಲ್ಲಿ, "... ಕನ್ನಡನಾಡು ಒಂದಾಗಬೇಕು, ಕನ್ನಡ ಜನರೆಲ್ಲ ಒಂದಾಗಬೇಕು ಎಂದು ಅಡಿಗಲ್ಲನ್ನು ಹಾಕಿ ಕರ್ನಾಟಕಕ್ಕೆ ಸ್ಥೂಲರೂಪ ಕೊಟ್ಟವರು ಕನ್ನಡ ಸಾಹಿತ್ಯ ಪರಿಷತ್ತಿನವರು. ಆ

ಕೀರ್ತಿ ಪರಿಷತ್ತಿನದು"[6] ಎಂಬುವು ಮುಖ್ಯವಾದುವು. ಸಿ.ಆರ್. ಗೋವಿಂದರಾಜು ಅವರು ಅಭಿವ್ಯಕ್ತಗೊಳಿಸುವಂತೆ, "ಪರಿಷತ್ತು ಆರಂಭದಲ್ಲಿ ಏಕೀಕರಣದ ವಿಷಯವನ್ನು ರಾಜಕೀಯವೆಂದು ತಿರಸ್ಕರಿಸಿದರೂ ಕ್ರಮೇಣ ಅದರ ಪರವಾಗಿಯೇ ನೇರವಾಗಿ ನಿರ್ಣಯಗಳನ್ನು ಅಂಗೀಕರಿಸಿದೆ. ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕಾರ್ಯಚಟುವಟಿಕೆಗಳು ಏಕೀಕರಣಕ್ಕೆ ಪರೋಕ್ಷವಾಗಿ ಬೆಂಬಲಿಸಿವೆ. ಸಮ್ಮೇಳನಗಳಲ್ಲಿ ಅಧ್ಯಕ್ಷರುಗಳ ಪ್ರತಿಕ್ರಿಯೆ ಮತ್ತು ಅಂಗೀಕರಿಸಲ್ಪಡುತ್ತಿದ್ದ ನಿರ್ಣಯಗಳು ಭಾವೀ ಕರ್ನಾಟಕದ ಉಗಮಕ್ಕೆ ಚಾಲನೆ ನೀಡಿವೆ. ಇಲ್ಲಿ ಪರಿಷತ್ತು ರಾಜಕೀಯ ಅಥವಾ ಸಾಂಸ್ಕೃತಿಕ ಯಾವ ನೆಲೆಯಲ್ಲಿ ಕಾರ್ಯನಿರ್ವಹಿಸಿದ್ದರೂ ಅದು ಏಕೀಕರಣಕ್ಕಂತೂ ಕನ್ನಡಿಗರನ್ನೂ ಸಜ್ಜುಗೊಳಿಸಿತು ಎಂಬುದರಲ್ಲಿ ಎರಡುಮಾತಿಲ್ಲ. ಅದು ತೆಗೆದುಕೊಳ್ಳುತ್ತಿದ್ದ ನಿರ್ಣಯಗಳಲ್ಲಿ ಕೆಲವು ಪುನರಾವರ್ತನೆ ಆಗುತ್ತಿದ್ದವು. ಆದರೆ ಅವು ಕನ್ನಡ ಮತ್ತು ಕರ್ನಾಟಕ ಪರವಾಗಿಯೇ ಇರುತ್ತಿದ್ದವು".[7]

2. ಕನ್ನಡ ಸಾಹಿತ್ಯ ಪರಿಷತ್ತಿನ ಶಾಖೆಗಳು ರಾಜ್ಯ ಮತ್ತು ಹೊರರಾಜ್ಯಗಳಲ್ಲೂ ಸ್ಥಾಪನೆಗೊಂಡಿವೆ. ಕೇಂದ್ರ ಪರಿಷತ್ತಿನೊಡನೆ ರಾಜ್ಯದ 30 ಜಿಲ್ಲೆಗಳಲ್ಲಿ ಜಿಲ್ಲಾ ಘಟಕಗಳು, ತಾಲ್ಲೂಕು ಘಟಕಗಳು; ಬೆಂಗಳೂರಿನ 28 ವಿಧಾನಸಭಾ ಕ್ಷೇತ್ರಗಳಲ್ಲಿ ಪರಿಷತ್ತಿನ ಘಟಕಗಳಿವೆ. ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳ ರಾಜ್ಯಗಳಲ್ಲಿ ಪರಿಷತ್ತಿನ ಗಡಿನಾಡು ಘಟಕಗಳು ಸ್ಥಾಪನೆಗೊಂಡಿವೆ.

3. ಸದಸ್ಯ ಸಂಪತ್ತೆ ಪರಿಷತ್ತಿನ ಬಲ. ಮಿತ ಸಂಖ್ಯೆಯ ಸದಸ್ಯರಿಂದ ಆರಂಭಗೊಂಡ ಪರಿಷತ್ತಿನ ಇಂದಿನ ಸಂಖ್ಯಾಬಲ 2,02,000.

4. ಪರಿಷತ್ತಿನಲ್ಲಿ ರೂಪಿಸಲಾದ ಅಮೃತೋತ್ಸವ ಹಾಗೂ ಕನ್ನಡನಿಧಿ ಯೋಜನೆಗಳು ಅತ್ಯಂತ ಯಶಸ್ವಿಯಾಗಿವೆ. ಹಾಗೆಯೇ, ಪರಿಷತ್ತಿನಲ್ಲಿ ಸ್ಥಾಪಿಸಲಾಗಿರುವ ಈವರೆಗಿನ ದತ್ತಿ ನಿಧಿಗಳ ಸಂಖ್ಯೆ 1637. ನೃಪತುಂಗ ಸಾಹಿತ್ಯ ಪ್ರಶಸ್ತಿ (ಮೊತ್ತ 7,00,001ರೂ) ಮತ್ತು ಶ್ರೀವಿಜಯ ಸಾಹಿತ್ಯ ಪ್ರಶಸ್ತಿ(ಮೊತ್ತ 1,11,111ರೂ)ಗಳನ್ನು ಕೊಡುವ ಪದ್ಧತಿ ಆರಂಭಗೊಂಡಿದೆ. ಇತರ ಪ್ರಶಸ್ತಿ-ಪುರಸ್ಕಾರ-ದತ್ತಿ ನಿಧಿಗಳಲ್ಲಿ ಪ್ರಮುಖವಾದುವೆಂದರೆ, ಪದ್ಮಭೂಷಣ ಶ್ರೀಮತಿ ಬಿ. ಸರೋಜಾದೇವಿ ಸಾಹಿತ್ಯ ಪ್ರಶಸ್ತಿ, ಶ್ರವಣಬೆಳಗೊಳದ ಚಾವುಂಡರಾಯ ಪ್ರಶಸ್ತಿ, ಪುಸ್ತಕ ಪ್ರಕಟಣೆ ದತ್ತಿ, ತಜ್ಞರ ಸಮಿತಿ ಪುರಸ್ಕೃತರನ್ನು ಆಯ್ಕೆ ಮಾಡಿ ನೀಡುವ ಪ್ರಶಸ್ತಿ ದತ್ತಿ, ಉತ್ತಮ ಪುಸ್ತಕಗಳಿಗೆ ಬಹುಮಾನ ನೀಡುವ ಪುಸ್ತಕ ಸ್ಪರ್ಧೆ ದತ್ತಿ ಮುಂತಾದವು.

ಈ ಮೇಲಿನ ದತ್ತಿನಿಧಿಗಳು ಅತ್ಯುತ್ತಮ ಗ್ರಂಥಗಳಿಗೆ ಪುರಸ್ಕಾರ ನೀಡಲು, ತಮ್ಮ ಹಿರಿಯರ ಹೆಸರಿನಲ್ಲಿ ಪುಸ್ತಕ ಪ್ರಕಟಿಸಲು, ಗ್ರಂಥಭಂಡಾರಕ್ಕೆ ಉತ್ತಮ ಪುಸ್ತಕಗಳನ್ನು ಕೊಳ್ಳಲು, ಪ್ರತಿಭಾ ಪುರಸ್ಕಾರ ನೀಡಲು, ಎಂ.ಎ ಮುಂತಾದ ತರಗತಿಗಳಿಗೆ ಬೋಧನೆ ಏರ್ಪಡಿಸಲು, ಉಪನ್ಯಾಸಗಳನ್ನು ವ್ಯವಸ್ಥೆಗೊಳಿಸಲು, ಕವಿ-ಕಾವ್ಯ ವಿಚಾರ ಸಂಕಿರಣಗಳನ್ನು ಹಮ್ಮಿಕೊಳ್ಳಲು - ಹೀಗೆ ಹಲವಾರು ಉದ್ದೇಶಗಳನ್ನೊಳಗೊಂಡಿವೆ.

5. ಪರಿಷತ್ತು ನಡೆಸುವ ಸಾಹಿತ್ಯ ಪರೀಕ್ಷೆಗಳು ಕನ್ನಡ ಸಾಹಿತ್ಯವನ್ನು ವ್ಯಾಸಂಗ ಮಾಡಲಪೇಕ್ಷೆಯುಳ್ಳವರಿಗೆ ವರಪ್ರದಾಯಕವೆನಿಸಿವೆ. 1940 ಜೂನ್ ತಿಂಗಳಲ್ಲಿ ಕನ್ನಡ ಅಣುಗ, ಕನ್ನಡ ಕಾವ, ಕನ್ನಡ ಜಾಣ ಪರೀಕ್ಷೆಗಳನ್ನು ಪ್ರಾರಂಭಿಸಲಾಯಿತು. ಇದಕ್ಕೆ

ಪ್ರೇರಣೆಯಾದವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಬಿಎಂಶ್ರೀಯವರೇ. 1948ರ ವೇಳೆಗೆ ಕನ್ನಡ ಅಣುಗ ಪರೀಕ್ಷೆಯನ್ನು ಕೈಬಿಡಲಾಯಿತು. 1966ರಲ್ಲಿ ಕನ್ನಡರತ್ನ ಪರೀಕ್ಷೆಯು ಪ್ರಾರಂಭಗೊಂಡಿತು. ಸಮಾಧಾನಕರ ಸಂಗತಿಯೆಂದರೆ, ಕರ್ನಾಟಕ ಸರ್ಕಾರ, ಬೆಂಗಳೂರು ವಿಶ್ವವಿದ್ಯಾಲಯಗಳು ಈ ಪರೀಕ್ಷೆಗಳನ್ನು ಮಾನ್ಯ ಮಾಡಿದ್ದು, ಸಹಸ್ರಾರು ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆಯತೊಡಗಿದ್ದಾರೆ. ಸರ್ಕಾರಿ ನೌಕರರಿಗೂ ಉನ್ನತ ಶಿಕ್ಷಣ ಹೊಂದುವ ಹಂಬಲವುಳ್ಳವರಿಗೂ ಲಾಭಕಾರಿಯೆನಿಸಿದೆ. ಹೊಸದಾಗಿ ಕನ್ನಡ ಕಲಿಯುವವರಿಗಾಗಿ ಕನ್ನಡ ಪ್ರವೇಶವೆಂಬ ಪ್ರಾಥಮಿಕ ಹಂತದ ಪರೀಕ್ಷೆ ಆರಂಭಗೊಂಡುದು 1992ರಲ್ಲಿ.

6. ಕನ್ನಡ ನಾಡು-ನುಡಿಗಳಿಗೆ ದೀರ್ಘಕಾಲ ಸಲ್ಲಿಸಿರುವ ಶ್ರೇಷ್ಠ ಸೇವೆಯನ್ನು ಮನಗಂಡು ಕನ್ನಡ ಸಾಹಿತ್ಯ ಪರಿಷತ್ತಿನ ಅತ್ಯುಚ್ಚ ಮನ್ನಣೆಯಾದ 'ಗೌರವ ಸದಸ್ಯತ್ವ' ನೀಡಿ ಪುರಸ್ಕರಿಸುವ ಯೋಜನೆ ಉದಾತ್ತವಾದುದು ಮಾತ್ರವಲ್ಲ, ಕನ್ನಡಿಗರೆಲ್ಲರ ಆತ್ಮಗೌರವವನ್ನು ವೃದ್ಧಿಸುವ ಪ್ರಯತ್ನವೂ ಆಗಿರುವಂಥಾದ್ದು. ಇಂಥಾ ಗೌರವಕ್ಕೆ ಪಾತ್ರರಾಗುವವರ ಸಂಖ್ಯೆ ಯಾವಕಾಲಕ್ಕೂ 5ನ್ನು ಮೀರದಂತಿರುವುದು ವಿಶೇಷ. ಈವರೆಗೆ 19 ಮಂದಿ ಸಾಧಕರನ್ನು ಗುರುತಿಸಿ ಗೌರವಿಸಲಾಗಿದೆ.

7. ಸಂಶೋಧನಾ ಕ್ಷೇತ್ರಕ್ಕೆ ಪರಿಷತ್ತು ಮೊದಲಿನಿಂದಲೂ ನೀಡುತ್ತಾ ಬಂದಿರುವ ಸಹಕಾರ-ಪ್ರೋತ್ಸಾಹಗಳು ಕರ್ನಾಟಕ ಸಾಹಿತ್ಯ-ಸಂಸ್ಕೃತಿ ಅಧ್ಯಯನ-ಪ್ರಸಾರಗಳಿಗೆ ಸಹಕಾರಿಯಾಗಿವೆ. ಪರಿಷತ್ತಿನ ಸ್ಥಾಪನೆಯೊಂದಿಗೆ ಪ್ರಾರಂಭಿಸಲ್ಪಟ್ಟ 'ಸರಸ್ವತಿ ಭಂಡಾರ'ವೆಂಬ ಗ್ರಂಥಾಲಯ; ತಾಡೋಲೆ, ಕೈ ಬರಹದ ಹಸ್ತಪ್ರತಿಗಳು ಇತ್ಯಾದಿಗಳುಳ್ಳ ಹಸ್ತಪ್ರತಿ ವಿಭಾಗ; ಸಂಶೋಧಕರಿಗೆ ಅಗತ್ಯ ಆಕರಗಳನ್ನೊದಗಿಸಿ ಅಧ್ಯಯನಕ್ಕೆ ಉತ್ತೇಜನ ನೀಡುತ್ತಿರುವ ಸಂಶೋಧನ ವಿಭಾಗ ಅಥವಾ ಸಂಶೋಧನಾ ಕೇಂದ್ರ(ಸ್ಥಾಪನೆ 1983); ಶಾಸನ, ಜಾನಪದ ತರಗತಿಗಳು, ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಳಿಗಾಗಿ ಸಂಶೋಧನ ಕೇಂದ್ರವನ್ನು ಉಪಯೋಗಿಸಿಕೊಳ್ಳುವಂತಾದುದು-ಹೀಗೆ ಪರಿಷತ್ತು ನಾನಾ ವಿಧದಲ್ಲಿ ಸೇವೆಯನ್ನು ಒದಗಿಸುತ್ತಾ ಬಂದಿದೆ.

8. ಕಾಲಕಾಲಕ್ಕೆ ಪರಿಷತ್ತು ಏರ್ಪಡಿಸುತ್ತಾ ಬಂದಿರುವ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಸಮ್ಮೇಳನ, ಸಮಾವೇಶ, ವಿಚಾರ ಸಂಕಿರಣ, ಕಮ್ಮಟ, ಮೇಳ, ಉಪನ್ಯಾಸ ಇತ್ಯಾದಿ ಕಾರ್ಯಕ್ರಮಗಳು ಜನರ ಮೇಲೆ ಮಾಡುತ್ತಿರುವ ಪ್ರಭಾವ-ಪರಿಣಾಮಗಳು ಎಣೆಯಿಲ್ಲದವು.

9. ಕನ್ನಡ ಸಾಹಿತ್ಯ ಪರಿಷತ್ತು ಈಗ ನೂರುವರುಷಗಳ ಸಂಭ್ರಮಾಚರಣೆಗೆ ಸಜ್ಜುಗೊಂಡಿದೆ. 2014-2015ರ ಸಾಲಿನಲ್ಲಿ ಕನ್ನಡ ನಾಡು-ನುಡಿ, ಭಾಷೆ-ಸಂಸ್ಕೃತಿ, ಕಲೆ-ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಅಸಂಖ್ಯಾತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಈ ಮಹಾನ್ ಸಂಸ್ಥೆ ಈ ಸಾಲಿನಲ್ಲಿ ಕೈಗೊಂಡಿರುವ ಮಹತ್ವದ ಯೋಜನೆಗಳೆಂದರೆ, ಎರಡು ಶತಮಾನಗಳಿಗೂ ಮೀರಿದ ಅವಧಿಯ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನೊಳಗೊಂಡ 17 ಸಂಪುಟಗಳ ರಚನೆ ಹಾಗೂ ಪ್ರಕಟಣೆ; ಕನ್ನಡದ ನೂರು ಮೌಲಿಕ ಗ್ರಂಥಗಳ ಮರುಮುದ್ರಣ; ಪರಿಷತ್ತಿನ ನೂರುವರುಷಗಳ ಇತಿಹಾಸವನ್ನು

ವಿಶಿಷ್ಟ ರೀತಿಯಲ್ಲಿ ನಿರೂಪಿಸುವ ನೆನಪಿನ ಸಂಪುಟ; ಪರಿಷತ್ತಿನ ಸಾಧನೆಯನ್ನು ಪರಿಚಯಿಸುವ ಸಾಕ್ಷ್ಯ ಚಿತ್ರ ನಿರ್ಮಾಣ; ಸಭಾಂಗಣ ಮತ್ತು ಅತಿಥಿಗೃಹಗಳನ್ನೊಳಗೊಂಡ ಶತಮಾನೋತ್ಸವ ಭವನ. ಪರಿಷತ್ತು ಘೋಷಿಸಿರುವಂತೆ, ಈ ಎಲ್ಲ ಯೋಜನೆಗಳಲ್ಲಿ ಕನ್ನಡ ಪರಂಪರೆಯ ಅರಿವುಳ್ಳ, ಆಧುನಿಕ ಮನೋಧರ್ಮದ, ವಿಮರ್ಶಾತ್ಮಕ ನಿಲುವಿನ, ವೈಚಾರಿಕ ಜಾಗೃತಿಯ ಹಾಗೂ ಸಾಮಾಜಿಕ ನ್ಯಾಯದ ನೆಲೆಯ ಲೇಖಕರು-ಚಿಂತಕರನ್ನು ಒಳಗೊಳ್ಳುವ ಪ್ರಯತ್ನವಿದೆ. ಪರಿಷತ್ತು ತನ್ನ ನವೋತ್ಸಾಹಗಳನ್ನು ಉಂಟುಮಾಡುವಲ್ಲಿ ಶ್ರಮವಹಿಸಿದೆ. ಕನ್ನಡಿಗರು ಕನ್ನಡ ಸಾಹಿತ್ಯ ಪರಿಷತ್ತಿಗೆ ಋಣಿಗಳಾಗಿರಬೇಕು.*

---

* ಈ ಪ್ರಬಂಧದ ಸಿದ್ಧತೆಯಲ್ಲಿ ಅಗತ್ಯ ಆಕರಗಳನ್ನೊದಗಿಸಿ ನೆರವಾದ ಡಾ. ಎಂ.ಜಿ. ನಾಗರಾಜ್, ಡಾ. ಸಿ.ಆರ್. ಗೋವಿಂದರಾಜು, ಡಾ. ಅಮರೇಶ್ ಯತಗಲ್ ಮತ್ತು ಕೆ.ಎಲ್. ರಾಜಶೇಖರ್ ಅವರುಗಳಿಗೆ ಆಭಾರಿಯಾಗಿದ್ದೇನೆ.

## ಕೊನೆ ಟಿಪ್ಪಣಿ

1. ಕರ್ನಾಟಕತ್ವದ ವಿಕಾಸ, ಪು.156.
2. ವಾಗ್ಭೂಷಣ, ಮೇ 1933, ಪು. 193.
3. ಕನ್ನಡದ ಕಾಲು ಶತಮಾನ, 1995, ಪು.4-5.
4. ಕರ್ನಾಟಕದ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು, 1995, ಪು.4-5.
5. ಕನ್ನಡಸಾಹಿತ್ಯ ಪರಿಷತ್ಪತ್ರಿಕೆ, ಜೂನ್ 1950,ಪು.2.
6. ಕನ್ನಡನುಡಿ, ನವೆಂಬರ್ 1956, ಪು.301.
7. ಕರ್ನಾಟಕದ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು, 1995, ಪು.34.

## ಆಕರಸೂಚಿ

1. ಎಂ.ವಿ. ಸೀತಾರಾಮಯ್ಯ(ಸಂ)., 1970, ಚಿನ್ನದ ಬೆಳಸು(ಸುವರ್ಣ ಮಹೋತ್ಸವ ಸವಿನೆನಪಿನ ಸಂಪುಟ: 1915-1970), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
2. ಸಿ.ಆರ್. ಗೋವಿಂದರಾಜು, 1995, ಕರ್ನಾಟಕದ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
3. ಜಗನ್ನಾಥ ಹೇಮಾದ್ರಿ, 2006, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
4. ಕನ್ನಡ ವಿಷಯ ವಿಶ್ವಕೋಶ-ಕರ್ನಾಟಕ, ಸಂಪುಟ 1 ಮತ್ತು 2, ಮೈಸೂರು ವಿಶ್ವವಿದ್ಯಾಲಯ, ಮೈಸೂರು, 2005 ಮತ್ತು 2007.
5. ಎಂ.ಜಿ. ನಾಗರಾಜ್, ಕನ್ನಡ ಸಾಹಿತ್ಯ ಪರಿಷತ್ತು: ಸಂಚಲನ ಸಾಧನೆ', ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ(ಸಂ: ಆರ್. ಗೋಪಾಲ್), ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು, 2013.
6. ಕನ್ನಡ ಸಾಹಿತ್ಯಪರಿಷತ್ಪತ್ರಿಕೆ ಮತ್ತು ಕನ್ನಡನುಡಿ ಸಂಚಿಕೆಗಳು.

■

## ಪುಸ್ತಕ ವಿಮರ್ಶೆ

# ಬಂಟ್ಸ್ ಇನ್ ಹಿಸ್ಟರಿ ಆ್ಯಂಡ್ ಕಲ್ಚರ್ : ಒಂದು ವಿಭಿನ್ನ ಕೃತಿ

–ಪ್ರದೀಪ್‌ಕುಮಾರ್ ಶೆಟ್ಟಿ
ಕೆಂಚನೂರ್



**ಬಂಟ್ಸ್ ಇನ್ ಹಿಸ್ಟರಿ ಆ್ಯಂಡ್ ಕಲ್ಚರ್**
ಲೇಖಕರು: ಬಿ. ಸುರೇಂದ್ರ ರಾವ್
ಪ್ರಕಾಶನ: ವರ್ಲ್ಡ್ ಬಂಟ್ಸ್ ಫೌಂಡೇಶನ್, ಮಂಗಳೂರು
ಮತ್ತು
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಸಂಸ್ಥೆ ಉಡುಪಿ
ಪುಟಗಳು : 360, ಬೆಲೆ : ರೂ. 500
ಮೊದಲ ಮುದ್ರಣ : 2012

ಸಮುದಾಯಗಳ ಚರಿತ್ರೆ ಬರೆಯುವುದೆಂದರೆ ಜೇನುಗೂಡಿಗೆ ಕೈಯಿಕ್ಕುವ ಪರಿಯೆಂದೇ ನನ್ನ ಭಾವನೆ ಜಾತಿ, ವರ್ಗ, ಸಮುದಾಯಗಳ ಮೇಲಿನ ಬರವಣಿಗೆಗಳು ಅನೇಕ ಸಂಗತಿಗಳನ್ನು ಆಗ್ರಹಿಸುತ್ತವೆ. ಅವುಗಳ ಹಿಂದೆ ಮತ್ತು ಮುಂದೆ ಅನೇಕ ವಿದ್ಯಮಾನಗಳು ಸಂಚರಿಸಿ, ಸುತ್ತಿಕೊಂಡು ಅತ್ಯಂತ ಎಚ್ಚರದಿಂದ ಅವುಗಳನ್ನು ಹಿಂಬಾಲಿಸುತ್ತವೆ. ಪ್ರತೀ ಚರಿತ್ರೆಗಳೂ ಕೂಡ ವರ್ತಮಾನದ ಜರೂರನ್ನು ಆಗ್ರಹಿಸುತ್ತವೆ. ಮೊತ್ತ ಮೊದಲನೆಯದಾಗಿ ಅಂತಹ ಜರೂರುಗಳು ವರ್ತಮಾನವೆಂಬ ಕಾಲದೇಶ, ಅಧಿಕಾರ ಪ್ರಶ್ನೆ ಮೊದಲಾದವುಗಳ ಮೇಲೆ ಕೂಡಾ ಆಧರಿಸಿರುತ್ತವೆ. ಎಲ್ಲಾ ಬಗೆಯ ಚರಿತ್ರೆಗಳೂ ಕೂಡಾ ಈ ತೆರನಾಗಿ ತಮ್ಮದೇ ತರ್ಕಗಳನ್ನು ಆಧರಿಸಿ, ಪೂರ್ವಾಗ್ರಹ, ನಿಹಿತ ಹಿತಾಸಕ್ತಿಗಳನ್ನು ಹೊಂದಿಯೇ ಸಾಗುತ್ತದೆ. ತಥಾಕಥಿತ ಆಧುನಿಕ (ಮಾಡರ್ನ್) ಎನ್ನುವ ಯುಗದ ಈ ರೀತಿಯ ಅನೇಕ ಸಂಗತಿಗಳು ಮುಖ್ಯವಾಗಿ ರಾಷ್ಟ್ರ, ಸಮುದಾಯ, ಜಾತಿ, ವರ್ಗ ಮುಂತಾದ ಗುರುತುಗಳು ಮತ್ತು ಅವುಗಳ ಮೇಲಿನ ರಾಜಕಾರಣದಿಂದ ಹೊರತಾಗಿರದೇ ಅವುಗಳಿಗೆ ಪೂರಕವಾದ ಕಥನ ಮತ್ತು ಮಾನ್ಯತೆಗಳನ್ನು ಆಗ್ರಹಿಸುತ್ತವೆ. ಯುರೋಪಿನ ಒಬ್ಬ ಪ್ರಸಿದ್ಧ ಚರಿತ್ರಕಾರನಂತೂ, "ಚರಿತ್ರೆಯೆಂದರೆ ಮಾನ್ಯತೆ, ಮಾನ್ಯತೆ ಗಿಟ್ಟಿಸುವ ಪ್ರಕ್ರಿಯೆ"ಯೆಂದೇ ಅರುಹಿರುವುದೂ ಕೂಡಾ ಸಮಂಜಸವೂ ಆಗಿದೆ. ಪ್ರತೀ ಚರಿತ್ರೆಯೂ ನಿರ್ಮಾಣ ಮತ್ತು ಪ್ರತೀ ಚರಿತ್ರೆಗಳೂ ನಿರ್ಮಾಣಕ್ಕೆ ತಕ್ಕುದಾದ ತರ್ಕಗಳನ್ನೂ ಕೂಡಾ ಹೊಂದಿರುತ್ತವೆ. ಒಂದು ರೀತಿ ಇಂತಹ ನಿರ್ಮಾಣಗಳು ಮಧ್ಯಯುಗದಲ್ಲಿ ಮತ್ತು ಆರಂಭದ ಮಧ್ಯಯುಗದಲ್ಲಿ ರೂಪುಗೊಂಡ 'ಚರಿತ' (ಉದಾಹರಣೆಗೆ ಹರ್ಷಚರಿತ)ಗಳ ರೀತಿಯಲ್ಲೇ ಸಾಗುತ್ತವಾದ್ದರಿಂದ

ನಾವು ತುಸು ಮಾರ್ಪಡಿಸಿ ಇವುಗಳನ್ನು 'ನವ ಚರಿತ'ಗಳೆಂದೇ ಗ್ರಹಿಸಬಹುದಾಗಿದೆ ಕೂಡಾ. ಸಮಾಜವೊಂದು, ಜಾಗತಿಕ ವ್ಯವಸ್ಥೆಯೊಂದು ತೀವ್ರ ತೆರನಾದ ಬದಲಾವಣೆ, ಸ್ಥಿತ್ಯಂತರಗಳನ್ನು ಹೊಂದಿ ಅದು ವರ್ಗ, ಸಮುದಾಯಗಳ ಮೇಲೆ ಬೀರುವ ಪರಿಣಾಮಗಳೂ ಕೂಡಾ ಸಮುದಾಯಗಳ ಅನನ್ಯತೆ ಮತ್ತು ಗುರುತುಗಳ ಚರಿತ್ರೆ ಮತ್ತು ಅಂತಹ ನ್ಯಾಯಬದ್ಧತೆಯ ಕಥನಗಳನ್ನು ಆಗ್ರಹಿಸಿ ಆಶ್ರಯಿಸುತ್ತವೆ. ಅಂತೆಯೇ ಪ್ರತೀ ಚರಿತ್ರೆ, ಚಾರಿತ್ರಿಕ ಕಥನಗಳೂ ಕೂಡಾ ಅಧಿಕಾರ ಪ್ರಶ್ನೆಯ ಮೇಲೆಯೇ ನಿಂತಿರುವುದಾಗಿದೆ. ಉದಾಹರಣೆಗೆ ವಿಶೇಷವಾಗಿ ಭಾರತದಲ್ಲಿ ಜಾಗತೀಕರಣದ ಪ್ರಕ್ರಿಯೆ ನಡೆದ 1990ರ ದಶಕದ ನಂತರ ಜಾಗೃತಗೊಂಡ 'ದಲಿತ' ಗುರುತು, ಸಕ್ರಿಯ ರಾಜಕಾರಣ, ದಲಿತ ಚಳವಳಿಯ ಕಾರಣದಿಂದ ನಿರ್ಮಿತವಾಗಿತ್ತಾದರೂ ಕೂಡಾ ಚರಿತ್ರೆ ಹಾಗೂ ತಮ್ಮದೇ ಆದ, ತಮಗೆ ಬಹಳ ಮುಖ್ಯವಾದ ಆದ ವೈಯುಕ್ತಿಕ ಚರಿತ್ರೆಯ ಕಥನದಿಂದಲೂ ಕೂಡಾ ಅವು ಏರ್ಪಡುತ್ತವೆ. ಅವು ವರ್ತಮಾನದ ಅಗತ್ಯತೆಗಳನ್ನೂ ಕೂಡಾ ಅದರಿಂದ ಪೂರೈಸಿಕೊಳ್ಳುತ್ತವೆ. ಭಾರತದಲ್ಲಿನ ಎಲ್ಲಾ ಜಾತಿ, ಸಮುದಾಯಗಳ ಚರಿತ್ರೆಗಳೂ ಸಹ ಇದೇ ತೆರನಾದುದು.

ಹೆಚ್ಚಿನ ಜಾತಿ ಮತ್ತು ಸಮುದಾಯಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಶೋಧ, ಅದು ಪಿ.ಹೆಚ್.ಡಿ ಆಗಿರಬಹುದು ಅಥವಾ ಸಾಮಾನ್ಯ ಪ್ರಬಂಧವಾಗಿರಬಹುದು, ಅವುಗಳನ್ನು ಆ ಸಮುದಾಯದ, ಜಾತಿಯ ಸದಸ್ಯರೇ ಕೈಗೊಂಡು ನಿರ್ವಹಿಸುವುದು ವಾಡಿಕೆ. ಕರ್ನಾಟಕದ ಹೆಚ್ಚಿನ ವಿಶ್ವವಿದ್ಯಾನಿಲಯದಲ್ಲಿ ನಡೆದ, ನಡೆಸುವ ಈ ರೀತಿಯ ಸಮುದಾಯದ ಸಂಪ್ರಬಂಧಗಳನ್ನು ಅವುಗಳಿಗೆ ಸೇರಿದವರೇ ಸಿಂಹಪಾಲು ಕೈಗೊಂಡಿದ್ದನ್ನು ಕೂಡಾ ಗಮನಿಸಬಹುದಾಗಿದೆ. ಒಂದು ರೀತಿ ಅಸ್ಖಲಿತ ಸತ್ಯದ ರೂಪದಲ್ಲಿ ಅದು ಜಾರಿಯಾಗುವುದನ್ನೂ ಕೂಡಾ ಗಮನಿಸಬಹುದು. ಅಂತಹ ಸಮುದಾಯದ ಬಗೆಗಿನ ಚರಿತ್ರೆಯನ್ನು ಬರೆದರೆ ಅಕಾಡಮೀಶಿಯನ್ಸ್ ಎಂದು ಕೇಳಿಕೊಳ್ಳುವ ಜನರಿಂದ ಹಿಡಿದು ಸಮುದಾಯದ ಸಾಮಾನ್ಯ ಜನ ಹಾಗೂ ಪ್ರಮುಖರವರೆಗೆ ಎಸಗುವ 'ಪ್ರಶ್ನೆ' ನಮ್ಮ ಸಮುದಾಯಕ್ಕೆ ಸೇರಿರದ ಒಬ್ಬ ವ್ಯಕ್ತಿಗೆ ನಮ್ಮ ಬಗ್ಗೆ, ನಮ್ಮ ಸಮುದಾಯದ ಬಗ್ಗೆ ಏನು ಗೊತ್ತುಂಟು? ಅಥವಾ ಅವನು ಏನು ಬರೆಯಬಲ್ಲ, ಬಂಜೆಗೇನು ಗೊತ್ತು ಹೆತ್ತ 'ನೋವು'? ಎಂಬ ರೀತಿಯ ವ್ಯಂಗ್ಯ, ಉಢಾಫೆಯವರೆಗೂ ಕೂಡಾ ಅದು ಸಾಗುತ್ತದೆ. ಯಾವುದೇ ಜ್ಞಾನ ಶಿಸ್ತುಗಳ ಅಧ್ಯಯನ, ಅಧ್ಯಾಪನ ಯಾರು ಬೇಕಾದರೂ ಮಾಡಬಹುದು. ಆದರೆ ಕನಿಷ್ಠ ಒಂದು ಜ್ಞಾನಶಿಸ್ತಿನ ಜತೆ ವ್ಯವಹರಿಸಲು ಬೇಕಾಗುವ ಪ್ರಾಥಮಿಕ ಸಂಗತಿಗಳನ್ನು ಅವರು ತಿಳಿದು ಕೊಂಡಿರಬೇಕಾಗುತ್ತದೆ. ಇದಷ್ಟೇ ಪೂರ್ವಾವಶ್ಯಕತೆಯಾಗಿರುತ್ತದೆ. ಅಂತೆಯೇ ದಾಮೋದರ ಧರ್ಮಾನಂದ ಕೊಸಾಂಬಿ ಗಣಿತಜ್ಞ ಎನ್ನುವುದಕ್ಕಿಂತ ಹೆಚ್ಚಾಗಿ ಚರಿತ್ರಕಾರ ಎಂದೆನಿಸಿಕೊಂಡಿದ್ದು. ಅದೇ ರೀತಿ ಆಯ್ದುಕೊಂಡ ವಿಷಯದ ಮೇಲೆ ಪ್ರೀತಿ, ಆಸ್ಥೆ ಕೂಡಾ ಬೇಕಾಗುತ್ತದೆ. ಈ ನೆಲೆಯಲ್ಲಿ ವೈಯುಕ್ತಿಕವಾಗಿ ನನ್ನ ಅಭಿಪ್ರಾಯ ಏನೆಂದರೆ, ಯಾವುದೇ ಒಂದು ಜಾತಿ, ಸಮುದಾಯದ ಚರಿತ್ರೆ ಅಥವಾ ಕಥನವನ್ನು ಸರಿಸುಮಾರು ವಸ್ತುನಿಷ್ಠವಾಗಿ ಚಿತ್ರಿಸಬೇಕೆಂದರೆ ಅದಕ್ಕೆ ಸ್ವಲ್ಪಮಟ್ಟಿಗಾದರೂ ಜ್ಞಾನಶಿಸ್ತುಗಳನ್ನು ತಿಳಿದು ಕೊಂಡಿರುವಂತಹ ವ್ಯಕ್ತಿಯ ಯೋಗ್ಯತಾಪತ್ರಗಳೇ ಸಮರ್ಪಕ ಎಂಬುದು. ಇಂತಹ

ವಿದ್ವಾಂಸರು ರಚಿಸುವ ಕಥನಗಳು ಸಮುದಾಯ ಆಗ್ರಹಿಸುವ ಅವರನ್ನು ಬಂಧಿಸುವ ಆಗ್ರಹಗಳನ್ನು ಮೀರಿ ನಿಂತು ತಕ್ಕಮಟ್ಟಿನ ವಸ್ತುನಿಷ್ಠತೆಯಿಂದ ಸಂವಾದಕ್ಕೆ ಅಣಿಯಾಗುತ್ತವೆ. ಸಂಪೂರ್ಣ ವಸ್ತುನಿಷ್ಠತೆ ಯಾರಿಗೂ ಕೂಡಾ ಸಾಧ್ಯವಿಲ್ಲ. ಗತ ಬೇರೆ, ಚರಿತ್ರೆ ಬೇರೆ. ಗತ ಅಥವಾ ಪ್ರಕರಣ ಯಾವಾಗಲೂ ಕೂಡಾ ಒಂದೇ ಆಗಿರುತ್ತದೆ. ಆದರೆ ವಿವಿಧ ಚರಿತ್ರೆಗಳು ಕೇವಲ ನಿರ್ಮಾಣಗಳು. ಇಲ್ಲಿ ಈ ತಕ್ಕಮಟ್ಟಿನ ವಸ್ತುನಿಷ್ಠತೆ ಅಂದರೆ, ಈ ವಿದ್ವಾಂಸರುಗಳು ಪ್ರಶ್ನಿಸಿ, ವಿಚಾರಿಸಿ, ತುಲನೆ ಮಾಡಿ ವಿಶ್ಲೇಷಿಸಿ ಹಾಗೂ ಇನ್ನೂ ಕೆಲವು ಸಾಧನಗಳನ್ನು ಬಳಸಿ ನಿರ್ದಿಷ್ಟ ಪಡಿಸುವ ಸಾಪೇಕ್ಷ ಕ್ರಮವೂ ಹೌದಾಗಿದೆ.

ಬಂಟ್ಸ್ ಇನ್ ಹಿಸ್ಟರಿ ಆ್ಯಂಡ್ ಕಲ್ಚರ್ ಈ ರೀತಿಯದಾದ ಒಂದು ಪ್ರಯತ್ನ. ಇದರ ಲೇಖಕರು ಮಂಗಳೂರು ವಿಶ್ವವಿದ್ಯಾಲಯದ ವಿಶ್ರಾಂತ ಇತಿಹಾಸ ಪ್ರಾಧ್ಯಾಪಕರಾದ ಸುರೇಂದ್ರ ರಾವ್. ಈ ಕೃತಿ ಮೂಲತಃ ಮಂಗಳೂರಿನ ಬಂಟ್ಸ್ ಫೌಂಡೇಶನ್, ರಾವ್ ಅವರಲ್ಲಿ ವಿನಂತಿಸಿ ಬರೆಸಿದ ಯೋಜನೆ. ಆದರೆ ಯಾವುದೇ ಆಗ್ರಹಗಳಿಲ್ಲದೆ. ಈ ಆಗ್ರಹಗಳು ಎಷ್ಟು ಸಮಸ್ಯೆ ಎಂಬ ಅರಿವಿದ್ದ ಕಾರಣದಿಂದಲೇನೇ ರಾವ್ ಅವರು ಅಂತಹ ಆಗ್ರಹಗಳಿಲ್ಲದ ಕಾರಣದಿಂದ ಒಪ್ಪಿದ್ದೆಂದು ಇಡೀ ಪುಸ್ತಕ ಕೂಡಾ ನಿರೂಪಿಸುತ್ತದೆ. ಅಂತಹ ಸಮುದಾಯ ಕಥನದ ಗುರುತು ಮತ್ತು ರಾಜಕಾರಣದ ಅರಿವಿದ್ದ ಕಾರಣ ಇಂತಹ ಉತ್ತಮ ಪುಸ್ತಕ ಮೂಡಿದೆ. ಈ ಬಂಟರು ಯಾರು? ಎನ್ನುವ ಪ್ರಶ್ನೆಯಿದ್ದಾಗ್ಯೂ ಕೂಡಾ, 'ಬಂಟ'ರೆನ್ನುವ ಸಮುದಾಯದ ಕುರಿತು ಬಂದಿರಬಹುದಾದ ಒಂದು ಅತ್ಯುತ್ಕೃಷ್ಟ ಪುಸ್ತಕ ಇದಾಗಿದೆ. ಉಳಿದಂತೆ ಇದುವರೆಗೆ ಬಂದಿರುವ ಹೆಚ್ಚಿನ ಪುಸ್ತಕಗಳು ಪ್ರಶ್ನೆಯನ್ನು ಹೊಂದಿಯೇ ಇಲ್ಲ, ಬದಲು ಬರೀ ಉತ್ತರದ ಕಣಜಗಳಾಗಿವೆ. 'ಬಂಟ್ಸ್ ಇನ್ ಹಿಸ್ಟರಿ ಆ್ಯಂಡ್ ಕಲ್ಚರ್' ಪುಸ್ತಕ ಉತ್ತರಗಳಿಗಿಂತ ಮುಖ್ಯವಾಗಿ ಹಲವು ಕೋನಗಳಲ್ಲಿ ಪ್ರಶ್ನೆಯನ್ನು ಎತ್ತುತ್ತದೆ. ಒಂದು ಹಂತದಲ್ಲಿ ಈ ಪ್ರಶ್ನೆಗಳೇ ಮುಖ್ಯ ಉತ್ತರಗಳಿಗಿಂತ, ಈ ಕೃತಿ, ಬರೆಸಿದ ಕೃತಿಗಿಂತ ಭಿನ್ನವಾಗಿದೆ. ಬರೆಸುವ ಕೃತಿಗಳು ಹಲವು ಅಪಾಯಗಳನ್ನು ಹೊಂದಿರುತ್ತವೆ. ಮುಖ್ಯವಾಗಿ ಯಾರು ಬರೆಯಿಸುತ್ತಾರೆಯೋ ಅವರ ತಾಳಗಳಿಗೆ ಹೆಜ್ಜೆ ಹಾಕುವ ಅಪಾಯ. ಅಂತಹ ಕೃತಿ ಸಿರಿ, ವೈಭವ, ಪ್ರಚಾರ ಇತ್ಯಾದಿಗಳನ್ನು ಹೊಂದಿ, ಸತ್ಯದಿಂದ, ಸತ್ಯದ ಬಹುತ್ವದಿಂದ ವಿಮುಖವಾಗಿರುತ್ತದೆ. ಇದು ಸತ್ಯದ ಶೋಧ ಮತ್ತು ಪ್ರಶ್ನೆಯ ಗುರಿಯನ್ನು ಸಂಪೂರ್ಣ ವಿಮುಖವಾಗಿಸಿತು ಎನ್ನುವುದಕ್ಕಿಂತಲೂ, ಅಂತಹ ಮಧ್ಯಮ ಮಾರ್ಗದಿಂದಲೇ ಅವುಗಳನ್ನು ನಿರ್ದಾಕ್ಷಿಣ್ಯವಾಗಿ ವಿಮುಖಗೊಳಿಸಿತು. ಬಂಟರ ಬಗೆಗೆ ಇದುವರೆಗೆ ಬಂದ ಹೆಚ್ಚಿನ ಬರಹ ಮತ್ತು ತಥಾಕಥಿತ ಅಧ್ಯಯನಗಳ ಸಮಸ್ಯೆ ಇರುವುದೇ ಇಲ್ಲಿ. ಈ ರೀತಿಯ ಅಧ್ಯಯನವನ್ನು ನಡೆಸಿದ ಹೆಚ್ಚಿನ ಬಂಟ ಸಮಾಜ ಬಾಂಧವರು 'ಪದ್ಮಪತ್ರ ಮಿವಾಂಬಸಾ' ಅಂದರೆ ಅಂಟಿಯೂ ಅಂಟದ ಹಾಗೆ ವರ್ತಿಸಲೇ ಇಲ್ಲ, ಬದಲು ಅಂಟಿಕೊಂಡರು. ಇದಲ್ಲದೆ ಯಾರೂ ಕೂಡಾ ಪ್ರಶ್ನೆಯನ್ನೇ ಮಾಡಲಿಲ್ಲ. ಹೀಗೆ ಬಂಟ್ಸ್ ಇನ್ ಹಿಸ್ಟರಿ ಆ್ಯಂಡ್ ಕಲ್ಚರ್ ಕೃತಿಯ ಮೊತ್ತಮೊದಲ ಶ್ರೇಯವೇ ಅದು ಅಕ್ಯಾಡಮಿಕ್ ಆಗಿ ಮತ್ತು ಸಾಮಾನ್ಯ ತರ್ಕಗಳಲ್ಲಿ ಪ್ರಶ್ನೆಗಳನ್ನು ಕೇಳಿದ್ದು ಹಾಗೂ ಬಂಟ ಎನ್ನುವ ಕಲ್ಪಿತ ಸಮುದಾಯದ ನಿರ್ಮಾಣ(ಮೇಕಿಂಗ್)ವನ್ನು ಸಂದೇಹಿಸಿದ್ದೇ ಆಗಿದೆ.

ಇದುವರೆಗಿನ ಬಂಟರ ಬಗೆಗಿನ ಹೆಚ್ಚಿನ ಬರವಣಿಗೆಗಳು ಅಕ್ಷರಶಃ ವಿಜೃಂಭಣೆಯೇ ಆಗಿವೆ. ಈ ಕಾರಣದಿಂದ ಅವು ಚರಿತ್ರೆಯ ಜತೆಗೆ ಪುರಾಣವನ್ನೂ ಬಳಸಿಕೊಳ್ಳುತ್ತವೆ. ಈ ಕಾರಣದಿಂದಲೇನೇ ಈವರೆಗೆ ಬಂದಿರುವ ಹೆಚ್ಚಿನ ಬರಹಗಳು ಭೂತಾಳಪಾಂಡ್ಯನಿಂದಲೇ ಆರಂಭವಾಗುತ್ತವೆ. ಇಂತಹ ಮಿಥಕಗಳು ಅನೇಕ ಬುಡಕಟ್ಟು ಸಮುದಾಯಗಳ ಒಂದು ವಿಶಿಷ್ಟ ಲಕ್ಷಣವೂ ಹೌದು. ಆಫ್ರಿಕಾದ ಬುಡಕಟ್ಟುಗಳಲ್ಲೂ ಸಹ ಈ ತೆರನಾದ ನಂಬಿಕೆ, ಮಿಥ್ಯಗಳಿವೆ. ಆದರೆ ಆ ನಂಬಿಕೆಗಳನ್ನು ಮೈಥಾಲಜಿಕಲ್ ಮತ್ತು ಆಂತ್ರೊಪೋಮೋರ್ಫಿಕ್ ನೆಲೆಯಲ್ಲಿ ಬಳಸಿಕೊಂಡರಷ್ಟೇ ಅವುಗಳ ಅನ್ವಯ ಮತ್ತು ವಿಶ್ಲೇಷಣೆಯಿಂದ ಸರಿಸುಮಾರಾದ ಒಂದು ಜನಪದದ, ಸಮುದಾಯದ ವಿಕಾಸದ ವಿನ್ಯಾಸ ಒದಗಿಬರುತ್ತದೆ. ಇಲ್ಲದಿದ್ದರೆ ಕಾಣ್ಕೆ ಮತ್ತು ಜಾಣ್ಮೆ ಎರಡೂ ಕೂಡಾ ಹಳ್ಳ ಹಿಡಿಯುತ್ತದೆ. ಅದು ಅತ್ಯಂತ ಜಾಣ ಚಿಂತಕನಿಗಷ್ಟೇ ಸಾಧ್ಯ. ಇನ್ನೂ ದೊಡ್ಡ ಜಾಣ್ಮೆಯೆಂದರೆ ಅಂತಹ ಮಿಥ್ಯವನ್ನು ದುಡಿಸಿಕೊಳ್ಳಲು ಕಷ್ಟವಾದರೆ ಅವುಗಳನ್ನು ಸಂಪೂರ್ಣ ವರ್ಜಿಸುವುದೂ ಆಗಿದೆ. ಇಲ್ಲಿ ಕೂಡಾ 'ಬಂಟ್' ಎನ್ನುವ ಕಲ್ಪಿತ ಸಮುದಾಯ ಅಥವಾ ಗುರುತು ಅತ್ಯಂತ ನಿಚ್ಚಳವಾಗಿ ಆಧುನಿಕ, ಆಧುನಿಕತೆಯ ಸಂದರ್ಭದಲ್ಲಿ ಒಡಮೂಡಿರುವ ಕಾರಣ, ಲೇಖಕ ಅಂತಹ ಕ್ಲಿಷ್ಟವಾದ ಕೆಲಸಕ್ಕೇನೇ ಕೈ ಹಾಕದೇ ಈ ಗುರುತನ್ನು ಅಥವಾ ಅದರ ಅಭಿವ್ಯಕ್ತಿಯಾಗಿರುವ ಸಮುದಾಯದ ಚರಿತ್ರೆಯನ್ನು 19ನೆಯ ಶತಕದಿಂದಲೇ ಚರ್ಚಿಸಿರುವುದೂ ಕೂಡಾ ಅತ್ಯಂತ ಯೋಗ್ಯವಾದುದೂ ಆಗಿದೆ. ಅಂತಹ ಪ್ರಾಚೀನ ಚರಿತ್ರೆಯೊಂದಿಗೆ ಜತಕು ಹಾಕುವ ಕ್ರಮ ರಾಜಕೀಯ ಭಾಷಣದಲ್ಲೋ ಅಥವಾ ಜಾತಿ, ಸಮುದಾಯದ ಸಮಾವೇಶದಲ್ಲೋ ಲಾಯಕ್ಕು ಎಂಬ ಪ್ರಜ್ಞಾವಂತಿಕೆ ಕೂಡಾ ಲೇಖಕರಿಗಿರುವುದರಿಂದಲೇನೇ ಈ ಕೃತಿ ಒಂದು ಪ್ರೌಢ ಬರವಣಿಗೆಯ ಉದ್ಯಮವಾಗಿ, ಸಂವಾದವಾಗಿ ನಮ್ಮ ಮುಂದಿದೆ. ಪ್ರಾಚೀನಕಾಲದಲ್ಲಿ ಪೃಥ್ವಿಯಲ್ಲೊದಗಿದ ಘಟವು... ಎನ್ನುವಲ್ಲಿಂದ ಬಂಟರ ಅಥವಾ ಯಾವುದೇ ಒಂದು ಸಮುದಾಯ, ಜಾತಿಯ ಚರಿತ್ರೆಯನ್ನು ಕಟ್ಟುವುದು ಸಾಧ್ಯವಿಲ್ಲ ಎನ್ನುವುದೂ ಕೂಡ ಕೃತಿಯ ಆಶಯವಾಗಿ ನಮಗಿಲ್ಲಿ ಕಾಣಿಸುತ್ತದೆ. ಯಾವುದೇ ಒಂದು ಸಮುದಾಯವನ್ನು ಎಲ್ಲಿಯವರೆಗೆ ಎಳೆಯಬಹುದು ಎನ್ನುವ ಪ್ರಶ್ನೆಗೆ ಬರೀ ಆಧುನಿಕ ಕಾಲಘಟ್ಟದವರೆಗೆ ಮಾತ್ರವೆನ್ನುವ ಉತ್ತರವನ್ನೂ ಬಂಟ್ಸ್ ಇನ್ ಹಿಸ್ಟರಿ ಆ್ಯಂಡ್ ಕಲ್ಚರ್ ಕೃತಿ ನೀಡುತ್ತದೆ. ಈ ಬಂಟ್ ಎನ್ನುವ ಒಂದು ಗುರುತು ಯುರೋಪಿನ ವಸಾಹತುಶಾಹೀ ಪ್ರಕ್ರಿಯೆ ನೀಡಿದ ಕೊಡುಗೆಯಾಗಿ ಅದು ಉಂಟುಮಾಡಿದ ಆಧುನಿಕತೆ ಮತ್ತದರ ವಿವಿಧ ಮಾಧ್ಯಮಗಳ ಯೋಗದಾನವೆಂದೇ ಕೃತಿ ಗ್ರಹಿಸುತ್ತದೆ. ಮುಖ್ಯವಾಗಿ 1871ರ ನಂತರ ಬ್ರಿಟಿಷ್ ಸಾಮ್ರಾಜ್ಯಶಾಹಿ ಯಾವಾಗ ಜನಗಣತಿಯನ್ನು ಆರಂಭಿಸಿತೋ, ಆಗ ಹೇಗೆ ವಿವಿಧ ಜಾತಿ ಸಮುದಾಯಗಳು ಪ್ರತಿನಿಧೀಕರಣವನ್ನು ಕಡೆದು ಈಗ ಇರುವ ತಕ್ಕಮಟ್ಟಿನ ಔಪಚಾರಿಕವಾದ ಜಾತಿ ಎನ್ನುವ ಚೌಕಟ್ಟು ಅಥವಾ ವ್ಯವಸ್ಥೆಯಾಗಿರುವ ಮಟ್ಟದ ಬೀಜರೂಪವನ್ನು ಪಡೆದವೆಂಬುದನ್ನೇ ಲೇಖಕರ ಪ್ರಮುಖ ವಾದಗಳನ್ನಾಗಿ ನಾವು ಗ್ರಹಿಸಬಹುದಾಗಿದೆ. ಈ ಕೃತಿಯಲ್ಲಿ ಲೇಖಕರ 'ಬಂಟ್', ಬಂಟರ ಸಮುದಾಯದ ನಿರ್ಮಾಣದ ಆರಂಭದ ಹಂತವನ್ನು ಕರಾವಳಿಯಲ್ಲಿ ಎಲ್ಲಾ ಸಮುದಾಯಗಳಿಗಿಂತ ಮೊದಲು ಅಂದರೆ ತಥಾಕಥಿತ ಬಂಟರ ಸಮುದಾಯದ ಜನ ಹಳ್ಳಿಗಳಿಂದ ಬಂದು

20ನೆಯ ಶತಮಾನದಾರಂಭದಲ್ಲಿ ನಗರಗಳಲ್ಲಿ ಓದಲೋಸುಗ ಹಾಸ್ಟೆಲ್ (ಬಂಟ್ಸ್ ಹಾಸ್ಟೆಲ್)ಗಳಲ್ಲಿ ನೆಲೆನಿಂತು ಏಕಛತ್ರಿಕೆಯನ್ನು ಪಡೆಯುವುದರಿಂದಲೇ ಉಂಟಾಯಿತು ಎನ್ನುವ ವಾದವೂ ಕೂಡಾ ಪುಷ್ಠಿಯೋಗ್ಯವಾಗಿದೆ. ಲೇಖಕರಿಗೆ 19ನೆಯ ಶತಮಾನದ ಉತ್ತರಾರ್ಧ ಮತ್ತು 20ನೆಯ ಶತಮಾನದ ಪ್ರಥಮಾರ್ಧದ ಸಮಾಜೋ-ಭೌತಿಕ ಕಾಲದೇಶ ಮತ್ತು ಪರಿಸ್ಥಿತಿಯಿಂದ ಬಂಟರು, 'ಬಂಟ'ಎನ್ನುವ ಪ್ರಜ್ಞೆ ಮೊಳೆತು ಸಮುದಾಯ ಉಗಮಿಸಿತೇ ಹೊರತು ಭೂತಾಳಪಾಂಡ್ಯನಿಂದಲ್ಲ' ಎನ್ನುವ ವೈಚಾರಿಕ ತರ್ಕವೇ ಮುಖ್ಯವಾಗುವುದೂ ಕೂಡಾ ಅತ್ಯಂತ ಉಚಿತವೇ ಆಗಿದೆ. ಇಂತಹ ದೃಷ್ಟಿ ಮತ್ತು ತರ್ಕ ಖಂಡಿತವಾಗಿ ಸಾಮಾನ್ಯ ನೆಲೆಯಲ್ಲಿ ಉದ್ಭವವಾಗದೇ ಅತ್ಯಂತ ಪರಿಣಿತಿಯ, ಓದಿನ ಮತ್ತು ಜ್ಞಾನ ಶಿಸ್ತಿನ ವ್ಯಾಪ್ತಿ ಮತ್ತು ಸ್ವರೂಪದ ಅರಿವಿನಿಂದಲೇ ಉಗಮಗೊಂಡಿರುವಂತದ್ದು ಎನ್ನುವ ಸಂಗತಿಯನ್ನೂ ಕೂಡಾ ನಮಗೆ ಮನದಟ್ಟು ಮಾಡುತ್ತದೆ. ಕುಂದಾಪುರದಿಂದ ಹಿಡಿದು ಕಾಸರಗೋಡಿನವರೆಗೆ ಕರಾವಳಿಯಲ್ಲಿ 20ನೆಯ ಶತಮಾನದ ಪ್ರಥಮಾರ್ಧದಲ್ಲಿ ಉದ್ಭವಿಸಿದ ಬಂಟರ ಹಾಸ್ಟೆಲ್‌ಗಳೇ ಕ್ರಮೇಣ ಛತ್ರಛ್ಛಾಯೆಗಳಾಗಿ ಸ್ವತಂತ್ರೋತ್ತರ ಭಾರತದಲ್ಲಿ ವಿವಿಧ ಬಂಟರ ಸಂಘಗಳಾಗಿ ರೂಪುಗೊಂಡಿರುವ ಅನುಭವಜನ್ಯ ಸಾಕ್ಯಗಳೂ ಸಹ 'ಬಂಟ' ಎನ್ನುವ ಸಮುದಾಯದ ಆಧುನಿಕ ವಿಕಾಸದ ಕಥೆಯನ್ನು ನಮಗೆ ಮನವರಿಕೆ ಮಾಡುವುದು.

'ಬಂಟ' ಎನ್ನುವ ಸಮುದಾಯದ ಬಗ್ಗೆ ಕೂಡಾ ಕೃತಿ ಅತ್ಯಂತ ನಿರ್ದಿಷ್ಟವಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. 'ಬಂಟರ ಯಾನೆ ನಾಡವರ' ಎನ್ನುವ ಸಂಯೋಜನೆಯನ್ನು ಅದು ಹೆಚ್ಚಾಗಿ ಗಮನಹರಿಸುವುದಿಲ್ಲ. ಅದು ಚಾರಿತ್ರಿಕವಾದ ದಾಖಲೆ ಮತ್ತು ಮಾಹಿತಿಗಳಿಂದ ಪುಷ್ಠಿಗೊಂಡು ಈ ಜತಕು ಎನ್ನುವುದೇ ಒಂದು ರೀತಿಯ ಅಸಹಜ ಗುರುತು ಎಂಬಂತೆ ಕಂಡಿದೆ. ಅಂದರೆ ಸರಿಸುಮಾರು ಕಾಸರಗೋಡ್ ನಿಂದ ಹಿಡಿದು ಉಡುಪಿಯವರೆಗಿನ ಅಥವಾ ಶಾಂಭವೀ ನದಿ ತೀರದ ಬ್ರಹ್ಮಾವರದವರೆಗಿನ ಭೂಮಿ ಮತ್ತು ಭಾಷೆಯ ವ್ಯಾಪ್ತಿಯಲ್ಲಿ ಅಂದರೆ ತುಳು ಭಾಷೆಯ ನೆಲೆಯಲ್ಲಿಯೇ ಬಂಟರ ಗುರುತನ್ನು ಅದು ಗ್ರಹಿಸಿದೆ. ಇದು ಸಮಂಜಸವೂ ಕೂಡಾ. ಇದಕ್ಕೆ ಚಾರಿತ್ರಿಕ ಮತ್ತು ಸಾಮಾಜಿಕ ನೆಲೆ ಸಾಕ್ಷ್ಯಗಳಿರುವುದನ್ನೂ, ತುಳು ಭಾಷೆಯ ತಳಹದಿಯಿರುವುದನ್ನೂ ಕೂಡಾ ಅತ್ಯಂತ ಸ್ಪಷ್ಟವಾಗಿ ಕೃತಿ ತಿಳಿಸುತ್ತದೆ. ಅಲ್ಲದೆ ಬಂಟ ಎನ್ನುವ ಶಬ್ದದ ನಿಹಿತತೆ, ನಿರ್ವಚನ ಮತ್ತು ಅದನ್ನು ವಿರಚಿಸಿದ ತುಳು ಭೌತಿಕ ಪರಿಸರದ ನೆಲೆಯಿಂದಲೇ ಅದನ್ನು ಗಮನಿಸಲಾಗಿದೆಯೇ ಹೊರತು 1950ರ ನಂತರ, 1970ರ ಸುಮಾರಿಗೆ ಈ ಏನು ಕುಂದಾಪುರದ ನಾಡವ ಮತ್ತು ತುಳು ಬಂಟ ಎನುವ ಕಲ್ಪಿತ ಸಮುದಾಯಗಳ ಕಸಿಯ ನಂತರದ 'ಬಂಟ' ಸಮುದಾಯವನ್ನು ಅನುಲಕ್ಷಿಸದಿರುವುದು ಸಾಧುವೂ ಆಗಿದೆ. ಈ ಕೃತಿಯ ಇನ್ನೊಂದು ಮುಖ್ಯ ಮಗ್ಗುಲೆಂದರೆ 19ನೆಯ ಶತಮಾನದ ಉತ್ತರಾರ್ಧ ಮತ್ತು ಸುಮಾರು 20ನೆಯ ಶತಮಾನದ ಆರಂಭದಲ್ಲಿದ್ದ ಬಂಟರ ಸಮಾಜೋ, ಆರ್ಥಿಕ, ರಾಜಕೀಯ ಸ್ಥಿತಿಯ ಚಿತ್ರಣ. ಇಡೀ ಕರಾವಳಿಯ ಆಧುನಿಕ ಚರಿತ್ರೆಯ ಲೋಪವೆಂದರೆ ಅದು ಬ್ರಾಹ್ಮಣೇತರ ಸಮುದಾಯಗಳನ್ನು ಸುಸಂಧೀಕರಿಸದಿರುವುದೇ ಆಗಿದೆ. ಅದು ಬ್ರಾಹ್ಮಣ ಸಮುದಾಯದ, ಗೌಡ ಸಾರಸ್ವತ ಮತ್ತು ಸಾರಸ್ವತದಂತಹ

ಸಮುದಾಯದ ತೊಟ್ಟಿಲುಗಳನ್ನು ಮಾತ್ರ ಘನವೆಂದು ತಿಳಿದು ಮೇಲಕ್ಕೆ ಕಟ್ಟಿದೆ. ಇಡೀ ಕರಾವಳಿಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಗಾಥೆಯೆಂದರೆ ಅದು ಒಂದು ರೀತಿ ಇಂಗ್ಲಿಷ್ ಶಿಕ್ಷಿತ ಜನಿವಾರೀಯ ಕಥನವಾಗಿಯೇ ಗೋಚರಿಸುತ್ತದೆ. ಯಾರೊಬ್ಬ ಅ-ಬ್ರಾಹ್ಮಣ, ಅಸ್ಪೃಶ್ಯ, ದೀನ-ದಲಿತ ಅಂತಹ ಗಾಥೆಯಲ್ಲಿ ನಿಲ್ಲಲೂ ಕೂಡ ಜಾಗವಿಲ್ಲದಿರುವಂತಹ ಸ್ಥಿತಿ ನಿರ್ಮಾಣವಾಗಿದೆ ಚರಿತ್ರೆಯಲ್ಲಿ. ಅದು ಅತ್ಯಂತ ಪ್ರಜ್ಞಾಪೂರ್ವಕ ಬರವಣೆಗೆಯ ಕ್ರಮವೂ ಆಗಿತ್ತು. ಅಂತಹ ಬರವಣಿಗೆ ಯಾರನ್ನು ಬೆರೆಯಬೇಕು? ಯಾರನ್ನು ಸೇರಿಸಬಾರದು? ಯಾರಿಗೆ ಜಾಗ ಕೊಡಬಾರದು? ಯಾರಿಗೆ ಜಾಗ ಕಾಣಿಸಬೇಕು? ಎಂಬಂತಹ ಬರಹ ಮತ್ತು ಸಂಪಾದನೆಯ ತರ್ಕ-ನಿಯಮಗಳ ಮೇಲೆ ಸಾಗಿದ್ದೂ ಕೂಡಾ ಒಂದು ಕಾರಣ. ಅದು ಸವರ್ಣೀಯತೆ, ಜಾತಿ, ಅಕ್ಷರ ಕಲಿಕೆಯ ಮೀಸಲಾತಿ, ಗರ್ವ, ರಾಜಕಾರಣ ಮುಂತಾದ ಸಂಗತಿಗಳ ಮನೋಸ್ಥಿತಿಗಳ ಅಭಿವ್ಯಕ್ತಿಯಾಗಿಯೂ ಸಹ ಗೋಚರಿಸುತ್ತದೆ. ಅದರ ಕಾರಣದಿಂದ ಕರಾವಳಿಯ ಆಧುನಿಕ ಚರಿತ್ರೆಯೆಂದರೆ ಕೆಲವೇ ಕೆಲವು ನಾಯಕರನ್ನು, ಕೆಲವೇ ಕೆಲವು ಹೋರಾಟಗಾರರನ್ನು ಪದೇ ಪದೇ ಉಲ್ಲೇಖಿಸಿ ಕ್ಲೀಷೆಗೊಳಿಸುವ ಕ್ರಮವಾಗಿಯೂ ಕೂಡಾ ಬೆಳೆಯಿತು. ಅವರನ್ನು ಬಿಟ್ಟರೆ ಚರಿತ್ರೆ ಇಲ್ಲವೇ ಇಲ್ಲ ಎನ್ನುವ ನಿರ್ವಾತವನ್ನೂ ಅದು ಸೃಷ್ಟಿಸಿತು. ಆದರೆ ಈ ಕೃತಿ ಅತ್ಯಂತ ಮನೋಜ್ಞವಾಗಿ ಈ ಕಾಲಘಟ್ಟದಲ್ಲಿ ಕೆಳಸ್ಥರ (ಸಬಾಲ್ಟರ್ನ್)ದ ಚರಿತ್ರೆಯ ಘಟಕಗಳಂತಿರುವ ಬಂಟ ಸಮುದಾಯದ ಅನೇಕ ಪುರುಷ ಮತ್ತು ಮಹಿಳಾ ಸ್ವಾತಂತ್ರ್ಯ ಹೋರಾಟಗಾರರನ್ನು ಸಮಕಾಲೀನ ಬ್ರಿಟಿಷ್ ವರದಿ, ಪತ್ರಾಗಾರ ವರದಿಗಳು, ಯುಗಧರ್ಮ ಮತ್ತು ಮಂಗಳೂರು ಸಮಾಚಾರ ದಂತಹ ಪತ್ರಿಕೆಗಳಿಂದ ಹೆಕ್ಕಿತೆಗೆದು ಪರ್ಯಾಯವಾಗಿ ನಿಲ್ಲಿಸಿ, ಈ ಪರ್ಯಾಯದಿಂದ ಒಂದು ರೀತಿ ಇಡೀ ಕರಾವಳಿಯ ಆಧುನಿಕ ಚರಿತ್ರೆಯ ಸಮಾಜೋ-ರಾಜಕೀಯ ಚರಿತ್ರೆಯನ್ನು ಹೊಸ ಬೆಳಕುಗಳೊಂದಿಗೆ ನೋಡಬೇಕಾದ ಅನಿವಾರ್ಯತೆ ಇದೆಯೇನೋ ಎನ್ನುವ ಸಂಶಯವನ್ನು ಕೂಡ ಹುಟ್ಟು ಹಾಕಿದೆ. ಆ ಕಾಲದ ಪ್ರಮುಖ ಬಂಟ ಉದ್ಯಮಿಗಳು, ಸಮಾಜಸುಧಾರಕರು, ಕೊಡುಗೈದಾನಿಗಳು ಮತ್ತು ಆರಂಭದ ಶಿಕ್ಷಣದ ಅಧ್ವರ್ಯುಗಳನ್ನೂ, ಗಾಂಧೀವಾದಿಗಳನ್ನೂ ಕೂಡಾ ಹೆಸರಿಸಿ ದಾಖಲಿಸಿ ಒಂದು ರೀತಿಯ ಹೊಸ ಸಂವಾದ ಮತ್ತು ಚರಿತ್ರೆಯ ರಚನೆಯ ಬಾಗಿಲನ್ನು ತೆರೆಸಿದೆ.

ಒಟ್ಟಾರೆ *ಬಂಟ್ಸ್ ಇನ್ ಹಿಸ್ಟರಿ ಅ್ಯಂಡ್ ಕಲ್ಚರ್* ಕೃತಿ ಬಹುತೇಕ ಎಲ್ಲಾ ಈ ಮೊದಲಿನ ಬಂಟರ ಬಗೆಗಿನ ಬರಹಗಳಿಗಿಂತ ಭಿನ್ನವಾಗಿ ನಿಂತಿದೆ. ಪುಸ್ತಕದ ನಡುವಿನಲ್ಲಿ ಬರುವ ಅನೇಕ ಗುತ್ತುಗಳ ಮನೆಯ ಚಿತ್ರ, ಅವುಗಳ ಕೆಳಗಿನ ವೈಭವದ ಶೀರ್ಷಿಕೆಯು ಲೇಖಕರ ಕೆಲಸವಲ್ಲವೆಂದೇ ನನ್ನ ಅನಿಸಿಕೆ. ಅದಕ್ಕೆ ಲೇಖಕರ ಪ್ರಜ್ಞಾಪೂರ್ವಕ ಸಮ್ಮತಿಯೂ ಇರಲಿಕ್ಕಿಲ್ಲವೆಂದೇ ನನ್ನ ಭಾವನೆ. ಒಟ್ಟಾರೆ ಪುಸ್ತಕ ಮಿತಿಗಳಿಂದ ಹೊರತಾದುದು ಸಂಪೂರ್ಣವಾಗಿಯೆಂದೂ ಅಲ್ಲ. ಆದರೂ ಕೃತಿಯ ಒಟ್ಟಾರೆ ಆಕೃತಿ ಅತ್ಯಂತ ಶಿಸ್ತುಬದ್ಧ, ತಾರ್ಕಿಕ, ಪ್ರಶ್ನಾಸಹಿತ, ಸಂವಾದಶೀಲೀಯವೆಂದೇ ನನ್ನ ತಿಳುವಳಿಕೆ.

■

# ಪುಸ್ತಕ ವಿಮರ್ಶೆ

## ಮಧ್ಯಕಾಲೀನ ಕರ್ನಾಟಕದಲ್ಲಿ ಆಹಾರ ಮತ್ತು ಪಾನೀಯಗಳು: ರಸಾನುಭವದ ಕೃತಿ

–ರಶ್ಮಿ ಎಸ್.
ಅತಿಥಿ ಉಪನ್ಯಾಸಕರು, ಯೂನಿವರ್ಸಿಟಿ ಕಲಾಕಾಲೇಜು,
ತುಮಕೂರು



**ಮಧ್ಯಕಾಲೀನ ಕರ್ನಾಟಕದಲ್ಲಿ ಆಹಾರ ಮತ್ತು ಪಾನೀಯಗಳು**

ಲೇಖಕರು: **ಡಾ. ಎನ್. ನಂದೀಶ್ವರ**
ಪ್ರಕಾಶನ: **ಪೂರ್ಣಚಂದ್ರ ತೇಜಸ್ವಿ ಪ್ರಕಾಶನ**
ಸಿದ್ಧಪ್ಪ ಲೇ ಔಟ್, ಬಾಲಾಜಿ ನಗರ, ಸಿರಾ ನಗರ
ತುಮಕೂರು ಜಿಲ್ಲೆ–572125.

ಪುಟಗಳು : 250, ಬೆಲೆ : ರೂ. 295
ಮೊದಲ ಮುದ್ರಣ : 2013

ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಜೀವನ ಶೈಲಿಯು ತೀವ್ರಗತಿಯಲ್ಲಿ ಬದಲಾಗುತ್ತಿದೆ. ಆಹಾರ, ಉಡುಪು, ಅಲಂಕಾರ, ರೀತಿನೀತಿಗಳೆಲ್ಲದರಲ್ಲಿಯೂ ಬದಲಾವಣೆಗಳಾಗುತ್ತಿವೆ. ಇವು ಒಂದಕ್ಕೊಂದು ಅಂತರ್ ಸಂಬಂಧ ಹೊಂದಿದ್ದು, ಸಂಸ್ಕೃತಿಯ ಭಾಗಗಳೂ ಆಗಿವೆ. ಹಾಗೆಯೇ, ಆಹಾರ ಪದ್ಧತಿಗೂ ಜನರ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗೂ ನೇರವಾದ ಸಂಬಂಧವಿದೆ. ಆರ್ಥಿಕತೆ ದಿನನಿತ್ಯದ ಆಹಾರ ಪದ್ಧತಿಯನ್ನು ರೂಪಿಸುವಲ್ಲಿ ನಿರ್ಣಾಯಕ ಪಾತ್ರ ವಹಿಸುವುದು. ಅನ್ಯ ಸಂಸ್ಕೃತಿಗಳ ಪ್ರಭಾವದಿಂದ ಕಾಲಕಾಲಕ್ಕೆ ಬದಲಾಗುವ ಜೀವನಶೈಲಿ, ರೀತಿರಿವಾಜು, ತಾಂತ್ರಿಕತೆ, ಪರಿಸರ, ಸಂಪನ್ಮೂಲಗಳು ಹಾಗೂ ಸಂಪರ್ಕಗಳು ಜನರ ಬದುಕಿನ ಆಹಾರ ಮತ್ತು ಪಾನೀಯಗಳ ಸ್ವರೂಪವನ್ನು ಬದಲಾಯಿಸುತ್ತಲೇ ಇರುತ್ತವೆ. ಹೀಗೆ ಪಾರಂಪರಿಕ ಆಹಾರ ಶೈಲಿಗಳಲ್ಲಿ ಬದಲಾವಣೆಗಳಾದಂತೆಲ್ಲ ಹೊಸ ಬಗೆಯ ರೋಗರುಜಿನಗಳು ಗೋಚರಿಸುತ್ತಲೆ ನಮ್ಮ ಆರೋಗ್ಯದ ಸಮಸ್ಯೆಗಳು ಕೂಡ ಸಂಕೀರ್ಣವಾಗುತ್ತಿದೆ. ಇಂದಿನ ಆರ್ಥಿಕ ನೀತಿಯು ಆಹಾರ ಪದ್ಧತಿಯ ಮೇಲೆ ಬೀರಿರುವ ಪರಿಣಾಮವನ್ನು, ಅಂತೆಯೇ ಆಹಾರ ಪದ್ಧತಿಯು ಭಾರತೀಯರ ಆರೋಗ್ಯದ ಮೇಲೆ ಬೀರಿರುವ ಪರಿಣಾಮಗಳನ್ನೂ ಇಂದು ವಿಮರ್ಶಿಸಬೇಕಾದ ಅವಶ್ಯಕತೆ ಇದೆ. ಈ ದಿಶೆಯಲ್ಲಿ ಪ್ರಸ್ತುತ ಸಂದರ್ಭದಲ್ಲಿ ಮಧ್ಯಕಾಲೀನ ಕರ್ನಾಟಕದಲ್ಲಿ ಆಹಾರ ಮತ್ತು ಪಾನೀಯಗಳು ಒಂದು ಮಹತ್ವದ ಕೃತಿಯಾಗಿದೆ. ಒಂದು ಕಾಲಘಟ್ಟದ ಆಹಾರ ಮತ್ತು ಪಾನೀಯಗಳನ್ನು ನೆನಪಿಸುತ್ತಲೇ, ಅದರೊಡನೆ ಇದ್ದ ಸಂಸ್ಕೃತಿಯನ್ನು ಪರಿಚಯಿಸುವಲ್ಲಿ ಕೃತಿಯು ಯಶಸ್ವಿಯಾಗಿದೆ.

ಆಹಾರ ಮತ್ತು ಪಾನೀಯಗಳು ಭಾರತದಾದ್ಯಂತ ಭೌಗೋಳಿಕ ಪರಿಸರ ಮತ್ತು ವಾಯುಗುಣದ ಆಧಾರದ ಮೇಲೆ ಪ್ರಭಾವಿತಗೊಂಡಿದ್ದು, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ಹೊಂದಿದೆ ಹಾಗೂ ಸಾಂಸ್ಕೃತಿಕ ವೈವಿಧ್ಯತೆಗೆ ತನ್ನದೇ ಆದ ಕೊಡುಗೆ ನೀಡಿದೆ. ಅದೇ ರೀತಿ ಕರ್ನಾಟಕದ

ಸಂದರ್ಭವಲ್ಲಿಯೂ ಈ ರೀತಿಯ ವೈವಿಧ್ಯತೆಯನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ನಡುಕಾಲದ ಕನ್ನಡಿಗರ ಆಹಾರ ಪದ್ಧತಿಯನ್ನು ಪರಿಚಯಿಸುವುದೇ ಈ ಸಂಶೋಧನಾ ಕೃತಿಯ ಬಹುಮುಖ್ಯ ಉದ್ದೇಶವಾಗಿದೆ. ಅಧ್ಯಯನದ ದೃಷ್ಟಿಯಿಂದ ಈ ಕೃತಿಯು ಒಂಭತ್ತು ಅಧ್ಯಾಯಗಳಿಂದ ಕೂಡಿದೆ. ಮೊದಲ ಅಧ್ಯಾಯದಲ್ಲಿ ಸೂಪಶಾಸ್ತ್ರ ಕುರಿತಂತೆ ದೊರೆಯುವ ಆಕರಗಳು, ಅದರ ಮಹತ್ವ, ಸಂಶೋಧನಾ ಗ್ರಂಥದ ಉದ್ದೇಶಗಳು ಇವೆ. ಕ್ರಿ.ಶ. ಹತ್ತನೇ ಶತಮಾನದಿಂದ ಕ್ರಿ.ಶ. 18ನೇ ಶತಮಾನದವರೆಗಿನ ಪ್ರಮುಖ ಕೃತಿಗಳನ್ನು ಗಮನಿಸಿ, ಆಹಾರದ ಬಗೆಗಿನ ವಿಚಾರಗಳನ್ನು ಹೆಕ್ಕಿ ತೆಗೆದು ವಿವರವಾಗಿ ಚರ್ಚಿಸಿದ್ದಾರೆ. ಆರ್ಥಿಕ ಇತಿಹಾಸದ ದೃಷ್ಟಿಯಿಂದ ಸ್ಥಳೀಯ ಆಹಾರ ಪದ್ಧತಿಗಳು ಬೆಳೆದುಬಂದ ಬಗೆ, ಪರಿಣಾಮವಾಗಿ ಪಡೆದುಕೊಂಡಿರುವ ರೂಪಗಳು ಸೂಪಶಾಸ್ತ್ರದ ಬೆಳವಣಿಗೆಗೆ ಪೂರಕವಾದ ಹಂತಗಳನ್ನು ಎರಡನೇ ಅಧ್ಯಾಯದಲ್ಲಿ ವಿಮರ್ಶಿಸಿದ್ದಾರೆ. ಈ ಅಧ್ಯಾಯದಲ್ಲಿ ಸೂಪಶಾಸ್ತ್ರದ ಬೆಳವಣಿಗೆ ಕುರಿತು ಸುಧೀರ್ಘ ಚರ್ಚೆಯನ್ನು ಬಳಕೆಯಲ್ಲಿರುವ ಆಕರಗಳ ಆಧಾರದ ಮೇಲೆ ಮಾಡುತ್ತಲೇ, ಇಂದಿನ ಕರ್ನಾಟಕದ ವ್ಯಾಪ್ತಿಯೊಳಗೆ ಒಳಪಡುವ ಕೃತಿಗಳ ವಿಮರ್ಶೆಗೆ ಒತ್ತುಕೊಟ್ಟಿರುತ್ತಾರೆ.

ಮೂರನೇ ಅಧ್ಯಾಯದಲ್ಲಿ ಅಂದಿನ ಕಾಲದ ಆಹಾರ ಪದಾರ್ಥಗಳು ಮತ್ತು ಅವುಗಳ ಬಳಕೆ ಕುರಿತ ವಿಚಾರಗಳನ್ನು ನೋಡಬಹುದು. ಇದರಲ್ಲಿ ಹರಪ್ಪ ಸಂಸ್ಕೃತಿಯ ಕಾಲದಿಂದ ವಸಾಹತುಶಾಹಿವರೆಗೆ ಆಹಾರ ಪಧಾರ್ಥಗಳ ಬಳಕೆಯಲ್ಲಿ ಉಂಟಾಗಿರುವ ಪ್ರಮುಖ ಬದಲಾವಣೆಗಳನ್ನು, ವಿದೇಶಿ ಮೂಲದ ಅನೇಕ ತರಕಾರಿಗಳು ಸ್ಥಳೀಯವೆನ್ನುವಂತೆ ಜನಪದರಲ್ಲಿ ಬಳಕೆಗೊಳಪಟ್ಟಿದ್ದರ ವಿಚಾರದ ಸ್ಥೂಲ ನೋಟವನ್ನು ಕಟ್ಟಿಕೊಡುತ್ತಾರೆ. ಧರ್ಮ ಆಹಾರ ಪದ್ಧತಿಯ ರೂಪವನ್ನು ಪರೋಕ್ಷವಾಗಿ ನಿಯಂತ್ರಿಸುವ ಪರಿಯನ್ನು ಇಲ್ಲಿ ವಿವರವಾಗಿ ಚರ್ಚಿಸಿದ್ದಾರೆ.

ಸಮಕಾಲೀನ ಪ್ರಮುಖ ಸಾಹಿತ್ಯಿಕ ಆಕರಗಳಲ್ಲಿ ಲಭ್ಯವಿರುವ ವಿವಿಧ ಭಕ್ಷ್ಯಗಳು, ಮಾಂಸಾಹಾರ, ಪಾನೀಯಗಳು, ತಾಂಬೂಲಗಳನ್ನು, ಅವುಗಳನ್ನು ಸಿದ್ಧಪಡಿಸುವ ವಿವರಗಳನ್ನು ನಾಲ್ಕನೇ ಅಧ್ಯಾಯದಿಂದ ಏಳನೇ ಅಧ್ಯಾಯದವರೆಗೆ ನೋಡಬಹುದು. ಬಗೆಬಗೆಯ ಪಾಯಸಗಳು, ಗಾರಿಗೆ, ಹೂರಿಗೆ, ಲಡ್ಡುಗೆ, ಫೇಣಿ, ಕಡುಬು, ಕಜ್ಜಾಯ, ಹುಗ್ಗಿ, ರಸಾಯನ, ಅನೇಕ ವಿಧದ ಸಾರು, ಅಂಬಲಿ, ಇಡ್ಡಲಿ, ದೋಸೆ, ರೊಟ್ಟಿ, ಸಂಡಿಗೆ, ಉಪ್ಪಿನಕಾಯಿ, ವಿವಿಧ ರೀತಿಯ ತುಪ್ಪ ತಯಾರಿಸುವ ರೀತಿಗಳನ್ನು ನಾಲ್ಕನೇ ಅಧ್ಯಾಯದಲ್ಲಿ ವಿವರಿಸಲಾಗಿದೆ. ಸ್ಥಳೀಯ ಮತ್ತು ವಿದೇಶಿ ಪ್ರವಾಸಿಗರ ಸಾಹಿತ್ಯ ಆಧರಿಸಿ ಭೂಷಿಕ, ಪೂರಭಟ್ಟಾಕ, ಪಂಚವರ್ಣಿ, ಉಪಖಂಡಕ ಮೊದಲಾದ ಅನೇಕ ವಿಧದ ಮಾಂಸಾಹಾರ ಅಡಿಗೆಯ ವಿಧಾನಗಳನ್ನು ಹಾಗೂ ಅಂದಿನ ಜನಜೀವನದಲ್ಲಿ ಹಾಸುಹೊಕ್ಕಿದ್ದ ಮಾಂಸಾಹಾರ ಪದ್ಧತಿಯ ರೂಪವನ್ನು ಐದನೆಯ ಅಧ್ಯಾಯದಲ್ಲಿ ವಿವರಣಾತ್ಮಕವಾಗಿ ವಿಮರ್ಶಿಸಿದ್ದಾರೆ. ಹಲವು ಬಗೆಯ ಪಾನೀಯಗಳು, ಅವುಗಳ ಉಪಯೋಗಗಳು, ಬಳಸುತ್ತಿದ್ದ ಸಂದರ್ಭವನ್ನು ಆರನೇ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇದರಲ್ಲಿ ಪ್ರತ್ಯೇಕವಾಗಿ ಮಾದಕ ಪಾನೀಯಗಳ ಕುರಿತು ಅಂದಿನ ಸಮಾಜದಲ್ಲಿದ್ದ ಚಿಂತನೆಗಳನ್ನು, ಅವುಗಳನ್ನು ತಯಾರಿಸುತ್ತಿದ್ದ ವಿಧಗಳನ್ನು ದಾಖಲಿಸಿದ್ದಾರೆ. ಏಳನೇ ಅಧ್ಯಾಯವು ತಾಂಬೂಲವನ್ನು ಕುರಿತಿದೆ. ಸಾಹಿತ್ಯದಲ್ಲಿ ತಾಂಬೂಲದ ಕುರಿತಿರುವ ಅನೇಕ ಪ್ರಸಂಗಗಳನ್ನು ವಿವರಿಸುವುದರೊಡನೇ ಅಂದಿನ ಸಮಾಜದ ಅನೇಕ ಆಯಾಮಗಳನ್ನು ಬಿಡಿಸಿಡುತ್ತದೆ. ಈ ಅಧ್ಯಾಯಗಳು ಓದುಗರಿಗೆ ಸಮಕಾಲೀನ ಜನರ ಜಿಹ್ವಾಸಕ್ತಿಯನ್ನು ಪರಿಚಯಿಸುತ್ತಲೇ ಅದರ ಸವಿ ನೋಡುವ ಬಯಕೆಯನ್ನು ಓದುಗರಲ್ಲಿ ಹುಟ್ಟಿಸುವುದು. ಅನೇಕ ಬಗೆಯ ಆಹಾರ ಪದಾರ್ಥಗಳು ಅಲ್ಪಸ್ವಲ್ಪ ಬದಲಾದ ರೂಪದಲ್ಲಿ ಇಂದಿಗೂ ಕಾಣಬಹುದಾದರೂ,

ಬಹುತೇಕ ಆಹಾರ ಪದಾರ್ಥಗಳು, ಅದರ ಬಳಕೆಯ ವಸ್ತುಗಳನ್ನು ಗುರುತಿಸುವುದು ಕಷ್ಟಕರವಾಗಿದೆ. ಮೇಲ್ನೋಟಕ್ಕೆ ಈ ಭಾಗಗಳು ಸಮಕಾಲೀನ ಕೃತಿಗಳೊಳಗೆ ದೊರೆತಿರುವ ವೈವಿಧ್ಯಮಯ ಅಡಿಗೆಗಳನ್ನು ದಾಖಲಿಸಿರುವ ಪುಸ್ತಕದಂತೆ ಕಂಡರೂ ಅಂದಿನ ಸಂದರ್ಭದ ಸಂಸ್ಕೃತಿಯ ಪದರವೊಂದನ್ನು ಅನಾವರಣ ಮಾಡುತ್ತಿದೆ.

ಎಂಟನೆಯ ಅಧ್ಯಾಯವು ಆ ಕಾಲದಲ್ಲಿ ಬಳಕೆಯಲ್ಲಿದ್ದ ಸಂಪ್ರದಾಯಗಳು, ಉಪಚಾರಗಳು, ಉಪಕರಣಗಳು ಮತ್ತು ನಿಷೇಧಗಳನ್ನು ಪರಿಚಯಿಸುವುದು. ಊಟ ಬಡಿಸುವ ವಿಧಾನ, ರಾಜರ ಊಟ ಒಳಗೊಂಡಿರಬೇಕಾದ ವಸ್ತುಗಳು, ಆಹಾರದ ದೋಷ ಮತ್ತು ಅದರ ಲಕ್ಷಣಗಳು, ಆಹಾರವನ್ನು ತೆಗೆದು ಕೊಳ್ಳಬೇಕಾದ ಪ್ರಮಾಣ, ಅಡಿಗೆ ತಯಾರಿಸಲು ಬಳಸುತ್ತಿದ್ದ ಹಲವು ವಿಧದ ಉಪಕರಣಗಳು, ಸೂಪಕಾರನಿಗಿರಬೇಕಾದ ಲಕ್ಷಣಗಳು, ಸಮಾಜದಲ್ಲಿ ಅತಿಥಿಗಳನ್ನು ಉಪಚರಿಸುತ್ತಿದ್ದ ಬಗೆ ಮೊದಲಾದವನ್ನು ಕುರಿತು ಸಾಕಷ್ಟು ವಿವರಣೆಯನ್ನು ಒಳಗೊಂಡಿದೆ. ಒಟ್ಟಾರೆಯಾಗಿ ಅಂದಿನ ಸಮಾಜದ ಕೆಲವು ವರ್ಗಗಳ ಸಂಸ್ಕೃತಿ ಮತ್ತು ಆರ್ಥಿಕತೆಯನ್ನು ಚಿತ್ರಿಸುವ ಪ್ರಯತ್ನವಿದೆ. ಉಪಸಂಹಾರದಲ್ಲಿ ಪಾಕಶಾಸ್ತ್ರದ ಬೆಳವಣಿಗೆ ನಮ್ಮ ಸಮಾಜ ಜೀವನದ ಕೆಲವು ಬಿಂಬಗಳಷ್ಟೇ, ಸಾಮಾನ್ಯ ಜನಜೀವನದ ಆಹಾರ ಪದ್ಧತಿಯು ಭಿನ್ನವಾಗಿತ್ತೆಂಬ ಅಂಶವನ್ನು ಸ್ಪಷ್ಟಪಡಿಸುವರು. ಯುದ್ಧಗಳು ಆಹಾರ ಪದ್ಧತಿಯ ಮೇಲೆ ಬೀರಿರುವ ಪ್ರಭಾವದ ಸ್ಥೂಲ ವಿವರಣೆಯನ್ನು ನೀಡಿ, ಆ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಅಧ್ಯಯನ ಆಗಬೇಕಾದ ಕುರಿತು ಚಿಂತಿಸಲು ಪ್ರೇರೇಪಿಸುವರು. ಸೂಪಶಾಸ್ತ್ರದಲ್ಲಿರುವ ಬದನೆಕಾಯಿ ಮತ್ತು ಬಾಳೆಕಾಯಿಯ ಅನೇಕ ಭಕ್ಷ್ಯಗಳು, ವಿವಿಧ ರೀತಿಯ ಕುಸುಮಗಳು ಹಾಗೂ ಬಗೆ ಬಗೆಯ ಬಾತುಗಳ ವಿವರಣೆಯನ್ನು ಪ್ರತ್ಯೇಕವಾಗಿ ಅನುಬಂಧದಲ್ಲಿ ನೀಡಿರುವರು.

* * *

ನಾಡಿನ ಸಂಸ್ಕೃತಿಯ ಅಂಗವಾದ ಆಹಾರ ಮತ್ತು ಪಾನೀಯಗಳ ಅಧ್ಯಯನಕ್ಕೆ ಸ್ವತಂತ್ರ ಅಸ್ತಿತ್ವ, ಸ್ಪಷ್ಟ ರೂಪ ಕಲ್ಪಿಸಿ ಕೊಡುವ ಪ್ರಯತ್ನ ಕೃತಿಯಲ್ಲಿ ಮೂಡಿಬಂದಿರುವುದು ಸ್ತುತ್ಯಾರ್ಹವಾಗಿದೆ. ಡಾ. ಎನ್. ನಂದೀಶ್ವರ ಅವರು ಮುಖ್ಯವಾಗಿ ಓಂ ಪ್ರಕಾಶ್ ಅವರ 'ಫುಡ್ ಅಂಡ್ ಡ್ರಿಂಕ್ಸ್ ಇನ್ ಏನ್ಷಿಯಂಟ್ ಇಂಡಿಯಾ', ಜ್ಯೋತ್ಸ್ನಾ ಕಾಮತ್ ಅವರ 'ಸೋಷಿಯಲ್ ಲೈಫ್ ಇನ್ ಕರ್ನಾಟಕ', 3ನೇ ಮಂಗರಸನ 'ಸೂಪಶಾಸ್ತ್ರ' ಕೃತಿಗಳಿಂದ ಪ್ರಭಾವಿವಾಗಿರುವುದು ಮೇಲ್ನೋಟಕ್ಕೆ ಅರಿವಾಗುವುದು. ಈ ಕೃತಿಯನ್ನು ಓದುವಾಗ ಮಧ್ಯಕಾಲೀನ ಕನ್ನಡ ಸಾಹಿತ್ಯದ ಬಗೆಗೆ ಲೇಖಕರಿಗಿರುವ ಜ್ಞಾನದ ವಿಸ್ತೃತವಾದ ಅರಿವನ್ನು ತೆರೆದಿಡುವುದು. ಈ ಕೃತಿಯಲ್ಲಿ ಬಳಸಿರುವ ಪ್ರಮುಖ ಕೃತಿಗಳು ಹೆಚ್ಚಾಗಿ ಇಂದಿನ ಮೈಸೂರು ಭಾಗದಿಂದ ಬಂದವರದಾಗಿದೆ. ಸಾಹಿತ್ಯ ಕೃತಿಗಳ ನೆಲೆಯಲ್ಲಿ ಈ ಸಂಶೋಧನಾ ಗ್ರಂಥ ಮೂಡಿಬಂದಿದೆ. ಇದರೊಡನೆ ಸಮಕಾಲೀನವಾಗಿದ್ದ ಪ್ರಭುತ್ವಗಳ ಸ್ಥೂಲ ಪರಿಚಯ ಮತ್ತು ಅದರ ಪ್ರಭಾವ ಹಾಗೂ ಮುಸ್ಲಿಮರ ಮತ್ತು ಯುರೋಪಿಯನ್ನರ ಆಗಮನದಿಂದ ಕರ್ನಾಟಕದ ಆಹಾರ ಪದ್ಧತಿಯ ಮೇಲೆ ಉಂಟಾಗಿರುವ ಪ್ರಭಾವ ಅಂದಿನ ಆಹಾರ ಪದ್ಧತಿಯಲ್ಲಿ ಸಮ್ಮಿಳಿತಗೊಂಡ ಸ್ವರೂಪವನ್ನು ನೀಡಿದ್ದರೆ ಕೃತಿಯ ಮೌಲ್ಯ ಮತ್ತಷ್ಟು ಹೆಚ್ಚಾಗುತ್ತಿತ್ತು. ಉದಾಹರಣೆಗೆ : ಮುಸ್ಲಿಮರ ಆಗಮನದಿಂದ ಬಿರಿಯಾನಿ, ಕೈಮ ಮೊದಲಾದ ಹೊಸ ಶಾಕಾಹಾರ ಅಡುಗೆಗಳು ಮತ್ತು ಯುರೋಪಿಯನ್ನರ ಬರುವಿಕೆಯಿಂದ ಭಾರತೀಯರಿಗೆ ಬ್ರೆಡ್, ಕೇಕ್, ಕಾಫಿ, ಟೀ ಮೊದಲಾದ ಆಹಾರ ಮತ್ತು ಪಾನೀಯಗಳು ಪರಿಚಯವಾದವು.

ಈ ಕೃತಿಯನ್ನು ಓದುವಾಗ ಪದೇ ಪದೇ ಕಾಡುವ ಪ್ರಶ್ನೆ ಎಂದರೆ ಮಧ್ಯಕಾಲೀನ ಕರ್ನಾಟಕ ಎಂದರೆ ಯಾವುದು ? ಯಾವ ಹಿನ್ನೆಲೆಯಲ್ಲಿ ನೋಡಲಾಗಿದೆ ಎಂಬುದು. ಈ ದಿಶೆಯಲ್ಲಿ ಸ್ಪಷ್ಟತೆಯನ್ನು ಕೃತಿಯ ಉದ್ದಕ್ಕೂ ಕಾಣಲು ಸಾಧ್ಯವಾಗುವುದಿಲ್ಲ. ಕೃತಿಯಲ್ಲಿ ಕರ್ನಾಟಕದ ಜನತೆ, ಕನ್ನಡ ನಾಡಿನ ಆಹಾರ ಪದಾರ್ಥಗಳು ಎಂದು ಆಗಾಗ ಬಳಸುವುದು ಸಹ ಇದನ್ನು ಮತ್ತಷ್ಟು ಗೊಂದಲವಾಗಿಸುವುದು. ಭೌಗೋಳಿಕ ಎಲ್ಲೆ ಹಾಗೂ ಇಂದಿನ ಕನ್ನಡ ನಾಡಿನೊಳಗೆ ಇರುವ ಅನೇಕ ಉಪಭಾಷೆಗಳು ಮನೆಮಾತಾಗಿರುವ ಸಮುದಾಯಗಳ ಸಂಸ್ಕೃತಿ, ಆಹಾರ ಪದ್ಧತಿಗಳು ಭಿನ್ನವಾಗಿರುವುದನ್ನು ಗಮನದಲ್ಲಿಟ್ಟು ಕೊಳ್ಳುವುದರ ಅಗತ್ಯವಿದೆ. ಜೊತೆಗೆ ಕಾಲಮಾನವು ಸಹ ಸುದೀರ್ಘವಾಗಿದ್ದು, ಈ ಕಾಲಮಾನದ ನಡುವೆ ಆಹಾರ ಪದ್ಧತಿಯಲ್ಲಿ ಉಂಟಾಗಿರುವ ಬದಲಾವಣೆಗಳು ಮುಖ್ಯವಾದ ಐತಿಹಾಸಿಕ ಕೊಂಡಿಗಳಾಗಿವೆ. ಮೊದಲ ಅಧ್ಯಾಯದಲ್ಲಿ ಆಹಾರದ ಪ್ರಶ್ನೆಯು ಮೂಲಭೂತ ಆರ್ಥಿಕ ಸಮಸ್ಯೆಗಳ ಮೇಲೂ ಬೆಳಕು ಚೆಲ್ಲುತ್ತದೆ(ಪು–15) ಎಂಬ ಆಶಯವನ್ನು ಕಾಣಬಹುದಾದರೂ ಈ ಪ್ರಯತ್ನ ಕೃತಿಯಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಉಪಸಂಹಾರದಲ್ಲಿ ಮಧ್ಯಮ ವರ್ಗ ಅಥವಾ ಜನ ಸಾಮಾನ್ಯರ ಆಹಾರದ ಚಿತ್ರಣವನ್ನು ನಮ್ಮ ಕವಿಗಳು ನೀಡಿಲ್ಲವೆಂದೇ ಹೇಳಬೇಕು(ಪುಟ–191) ಎಂಬ ಹೇಳಿಕೆಯನ್ನು ನೋಡಬಹುದು. ಲೇಖಕರು ಹೇಳುವಂತೆ ಓದುಗರಿಗೆ ಇದು ಜನಸಾಮಾನ್ಯರ ಅಡುಗೆಯಂತೆ ಕಾಣದೆ, ರಾಜ ಮನೆತನದವರ, ಸಾಮಂತರ, ಸಿರಿವಂತರ ಅಡುಗೆಯಂತೆಯೇ ಕಂಡುಬರುವುದು. ಆದರೆ ಮಧ್ಯಮ ವರ್ಗ ಎಂದು ಹೇಳಿರುವುದು ಕಾಲಮಾನದ ದೃಷ್ಟಿಯಿಂದ ಆಭಾಸವಾಗಿ ಕಾಣುವುದು. ಮಧ್ಯಮ ವರ್ಗದ ಬೆಳವಣಿಗೆಯು ವಸಾಹತುಶಾಹಿ ಕಾಲದಿಂದ ಈಚೆಗೆ ಕಂಡುಬರುವುದಾಗಿದ್ದು, ಈ ಕಾಲಘಟ್ಟದಲ್ಲಿ ಗುರುತಿಸಲಾಗುವುದಿಲ್ಲ. ಬದಲಿಗೆ, ಜನಪದ ಆಹಾರ, ತಿಂಡಿ ತಿನಿಸು ಪಾನೀಯಗಳನ್ನು ಅಧ್ಯಯನದ ವ್ಯಾಪ್ತಿಯೊಳಗೆ ತಂದಿದ್ದಲ್ಲಿ ಕೃತಿಯು ಮತ್ತಷ್ಟು ಉಪಯುಕ್ತವಾಗುತ್ತಿತ್ತು. ಇನ್ನುಳಿದಂತೆ ಕೃತಿಯಲ್ಲಿ ಅಲ್ಲಲ್ಲಿ ಮುದ್ರಾದೋಷಗಳೂ ನುಸುಳಿವೆ.

ಇವೆಲ್ಲವುಗಳ ನಡುವೆಯೂ ಕೃತಿಯು ಮಧ್ಯಕಾಲೀನ ಜನತೆಯ ಆಹಾರ ಮತ್ತು ಪಾನೀಯಗಳ ಬಗೆಗೆ ನೀಡುವ ಮಾಹಿತಿಯು ಅಪೂರ್ವವಾಗಿದೆ. ಮಾನವ ಜೀವನದ ಬಹು ಮೂಲಭೂತವಾದ ವಿಷಯವೊಂದರ ಹಲವು ಮುಖಗಳನ್ನು ಚರ್ಚಿಸುವ ಉತ್ತಮ ಪ್ರಯತ್ನವಾಗಿದೆ. ಆಹಾರ ಪದ್ಧತಿ ಜನಜೀವನ ಕುರಿತ ಅಧ್ಯಯನವಾಗಿರುವುದರಿಂದ ಮೇಲ್ನೋಟಕ್ಕೆ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನವಾಗಿದೆಯಾದರೂ, ಅಂತರ್ಯದಲ್ಲಿ ಸಾಂಸ್ಕೃತಿಕ ಅಧ್ಯಯನವಾಗಿ ರೂಪುಗೊಂಡಿದೆ. ಇದು ಅಂದಿನ ಸಮಾಜದ ಮೇಲ್ವರ್ಗದ ಸಂಸ್ಕೃತಿಯನ್ನು ಉತ್ತಮವಾಗಿ ಚಿತ್ರಿಸಿರುವುದು. ಅಧ್ಯಾಯದ ಕೊನೆಯಲ್ಲಿ ನೀಡಿರುವ ಸುದೀರ್ಘವಾದ ಅಡಿ ಟಿಪ್ಪಣಿಗಳು, ಗ್ರಂಥದ ಕೊನೆಯಲ್ಲಿರುವ ಅನುಬಂಧಗಳು ಹಾಗೂ ಆಕರಗಳು ಲೇಖಕರ ಅಧ್ಯಯನದ ಕ್ರಮವನ್ನು ಪ್ರತಿಬಿಂಬಿಸುತ್ತವೆ. ಒಟ್ಟಾರೆ ಹೇಳುವುದಾದರೆ ಕನ್ನಡದ ಮಟ್ಟಿಗೆ ಇದೊಂದು ಅಪರೂಪದ ಹಾಗೂ ವಿನೂತನವಾದ ಸಂಶೋಧನ ಪ್ರಯತ್ನವಾಗಿದೆ. ಇಂದಿನ ಭೋಜನಪ್ರಿಯರನ್ನು ಬರಸೆಳೆಯುವ ಪಾರಂಪರಿಕ ಹೆಸರಿನ ಹಳ್ಳಿಮನೆ, ಹಟ್ಟಿಕಾಫಿ ಮೊದಲಾದ ಆಧುನಿಕ ಹೋಟೆಲ್, ರೆಸ್ಟೋರೆಂಟ್‌ಗಳ ಸೆಳಕು ಕೇವಲ ತಳುಕಿನದಾಗಿದೆ. ಅವುಗಳಿಗೆ ಪರ್ಯಾಯವೆಂದರೆ, ಈ ಕೃತಿಯಲ್ಲಿ ವಿವರಿಸಿರುವ ನಮ್ಮ ವಿಸ್ಮೃತಿಗೆ ಸರಿದ ಕೆಲವಾದರೂ ಸಾಂಪ್ರದಾಯಿಕ ತಿಂಡಿ–ತಿನಿಸು, ಅಡುಗೆಗಳನ್ನು ರುಚಿಕಟ್ಟಾಗಿ ತಯಾರಿಸಬಹುದಾದರೆ, ಅಷ್ಟರ ಮಟ್ಟಿಗೆ ಕೃತಿಯು ಜೀವಂತಿಕೆ ಪಡೆದಿದೆ ಎಂದೇ ಅರ್ಥ. ■

## ಪುಸ್ತಕ ವಿಮರ್ಶೆ

## ಇದು ಬರ್ಲಿನ್! ಇದು ಜರ್ಮೇನಿಯ!

-ಯು.ಎನ್.ಸಂಗನಾಳಮಠ
"ಜ್ಯೋತಿರ್ಲಿಂಗ", 1ನೇ ತಿರುವು, ಹೈಸ್ಕೂಲ್ ಬಡಾವಣೆ,
ಶಿವಮೊಗ್ಗ ರಸ್ತೆ, ಹೊನ್ನಾಳಿ, ದಾವಣಗೆರೆ-ಜಿಲ್ಲೆ



**ಇದು ಬರ್ಲಿನ್! ಇದು ಜರ್ಮೇನಿಯ!**

ಲೇಖಕರು: **ಡಾ. ಎನ್. ನಂದೀಶ್ವರ**
ಪ್ರಕಾಶನ: ಪ್ರಕಾಶಕರು: **ಹಂಸ ಪ್ರಕಾಶನ,**
947, 3ನೇ ಮುಖ್ಯರಸ್ತೆ, ವಿಜಯನಗರ,
ಬೆಂಗಳೂರು-560104

ಪುಟಗಳು : 560, ಬೆಲೆ : ರೂ. 300
ಮೊದಲ ಮುದ್ರಣ : 2013

ವಾಣಿಜ್ಯ ಪದವಿ ಹೊಂದಿ ಬ್ಯಾಂಕ್ ಸೇವಾ ಕ್ಷೇತ್ರದಿಂದ ನಿವೃತ್ತಿ ಹೊಂದಿ, ಪ್ರವೃತ್ತಿಯಿಂದ ದಿವ್ಯ ನಿರ್ಲಕ್ಷಕ್ಕೆ ಒಳಗಾಗಿರುವ ಐತಿಹಾಸಿಕ ಸ್ಥಳಗಳ ಅನ್ವೇಷಣಾಕಾರರಾಗಿರುವ ಆಗುಂಬೆ ಎಸ್.ನಟರಾಜ್ ಅವರು ಇತಿಹಾಸವನ್ನು ಒಂದು ವಿಷಯವಾಗಿ ಓದದೇ, ಇತಿಹಾಸ ಬೋಧಿಸದೇ ಹವ್ಯಾಸ ಇತಿಹಾಸಕಾರರಾಗಿ ಸಂಶೋಧನೆಯಲ್ಲಿ ತೊಡಗಿಕೊಂಡು ಇತಿಹಾಸಕಾರರು ಮಾಡಲಾಗದನ್ನು ತಮ್ಮ ಹಲವು ಕೃತಿಗಳ ಮೂಲಕ ಮಾಡಿ ತೋರಿಸಿದ್ದಾರೆ. ಅನೇಕ ಇಂಗ್ಲಿಷ್ ಮತ್ತು ಕನ್ನಡ ಕೃತಿಗಳನ್ನು ಆಳವಾಗಿ ಅಭ್ಯಸಿಸಿ ವಿಷಯ ಸಂಗ್ರಹಿಸುವ ಅವರ ಬರವಣಿಗೆಗಳೆಲ್ಲವೂ ನಿಖರ ಮತ್ತು ನಿರ್ದಿಷ್ಟ. ಈ ವರೆಗೂ ಅವರು ಚಾರಿತ್ರಿಕ ಕೃತಿಗಳು, ಪ್ರವಾಸ ಕಥನಗಳು ಮತ್ತು ಸಾಹಿತ್ಯದ ವಿವಿಧ ಪ್ರಕಾರಗಳೂ ಸೇರಿದಂತೆ 20 ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಇತ್ತೀಚಿನ ಅವರ ಚಾರಿತ್ರಿಕ ಕೃತಿ *ಇದು ಬರ್ಲಿನ್! ಇದು ಜರ್ಮೇನಿಯ!* ಕನ್ನಡಕ್ಕೆ ಅತ್ಯಂತ ಅಪರೂಪವಾದ ಕೃತಿ.

*ಇದು ಬರ್ಲಿನ್! ಇದು ಜರ್ಮೇನಿಯ!* 538 ಪುಟಗಳ ಬೃಹತ್ ಕೃತಿ. ಈ ಕೃತಿಯ ಮುನ್ನುಡಿಯಲ್ಲಿ ಲೇಖಕರು "ಪಶ್ಚಿಮ ಯೂರೋಪಿನ ಐತಿಹಾಸಿಕ ನಗರಗಳ ಪ್ರವಾಸ ಕೈಗೊಂಡಾಗ ಜರ್ಮನಿಯ ರಾಜಧಾನಿ ಬರ್ಲಿನ್ ನಗರವನ್ನು ನೋಡಿ ಆನಂದಿಸಿದೆ. ಬರ್ಲಿನ್ ನಗರದ ಬಗ್ಗೆ ಪ್ರವಾಸ ಕಥನ ರಚಿಸುವ ಯತ್ನಮಾಡಿದೆ. ಬರ್ಲಿನ್ ಪ್ರವಾಸ ಕಥನಕ್ಕಿಂತ ಈ ಮಹಾನ್ ಐತಿಹಾಸಿಕ ಬರ್ಲಿನ್ ನಗರ ಎರಡು ಮಹಾಯುದ್ಧಗಳಿಗೆ ನಾಂದಿಯಾಡಿ ವಿಶ್ವವನ್ನು ತಲ್ಲಣಿಸಿ ಲಕ್ಷಾಂತರ ಜನರ ಆಹುತಿ ತೆಗೆದುಕೊಂಡ ಇತಿಹಾಸವನ್ನು ಸ್ವಲ್ಪಮಟ್ಟಿಗೆ ಅರಿಯಬಹುದೆಂಬ ನಂಬಿಕೆ ಹುಟ್ಟಿ ಈ

ಗ್ರಂಥ ರಚನೆಮಾಡಿದೆ." ಎಂದಿದ್ದಾರೆ. ಇತಿಹಾಸಕಾರರ ಪ್ರಕಾರ ಬರ್ಲಿನ್ ಇತಿಹಾಸ ಬಹಳ ಪ್ರಕ್ಷುಬ್ಧವಾದುದ್ದು. ಅದು ಬೆಳೆದದ್ದು ವೇಗವಾಗಿ ಮತ್ತು ಅವನತಿ ಹೊಂದಿದ್ದೂ ವೇಗವಾಗಿ. ತನ್ನ ಇತಿಹಾಸದುದ್ದಕ್ಕೂ ವಿಜಯೋತ್ಸವದ ಪರಾಕಾಷ್ಠೆ ಆಚರಿಸಿ ಪರಾಭವದ ಅವಮಾನಗಳಿಂದ ಕಳೆಗುಂದಿತ್ತು. ಫ್ರೆಡರಿಕ್ ಮಹಾಶಯನ 30 ವರ್ಷಗಳ ಚಕ್ರಾಧಿಪತ್ಯದ ನಂತರ ಫ್ರಾನ್ಸ್‌ನ ನೆಪೋಲಿಯನ್ ಕಾಲದಲ್ಲಿ ಬರ್ಲಿನ್ ಪದಾಘಾತವಾಯಿತು. ನಂತರ ಬಿಸ್ಮಾರ್ಕ್‌ನಿಂದ ಒಕ್ಕೂಟವಾಗಿ, ಬರ್ಲಿನ್ ಜರ್ಮನಿಯ ರಾಜಧಾನಿಯಾಗಿ, ಯೂರೋಪಿನ ಪ್ರಮುಖ ಕೈಗಾರಿಕೋದ್ಯಮದ ಪ್ರಬಲ ನಗರವಾಗಿ, ಮೊದಲ ಮಹಾಯುದ್ಧದಲ್ಲಿ ಮೂರುಲಕ್ಷ ನಾಗರಿಕರನ್ನು ಕಳೆದುಕೊಂಡಿತು. ಪ್ರಜಾಪ್ರಭುತ್ವ ರೀತಿಯಲ್ಲಿ ಸ್ಥಾಪಿತವಾದ ವೈಮಾರ್ ನಗರ, ಹಿಟ್ಲರ್‌ನ ಆಳ್ವಿಕೆಯಲ್ಲಿ ಬರ್ಲಿನ್ ಪ್ರಗತಿ ಸಾಧಿಸಿದರೂ ಎರಡನೇ ಮಹಾಯುದ್ಧದ ಅಂತ್ಯದಲ್ಲಿ ಧ್ವಂಸವಾಯಿತು. ಯುದ್ಧಾನಂತರ ಇಬ್ಭಾಗವಾಗಿ ಮಧ್ಯದಲ್ಲಿ ಗೋಡೆ ಎದ್ದು, ಅಂತಿಮವಾಗಿ ಮುರಿದು, ನಗರ ಒಂದಾಗಿ ನೂತನ ಜರ್ಮನ್ ರಾಜ್ಯದ ರಾಜಧಾನಿಯಾಗಿ 'ಜರ್ಮನ್ನರ ಭಾಗ್ಯ ನಗರ' ಎಂದು ಕರೆಸಿಕೊಂಡಿರುವ ಬರ್ಲಿನ್ ನಗರದ ಹುಟ್ಟು, ಅಳಿವು, ಮರುಹುಟ್ಟು ಇದರ ಬಗ್ಗೆ ಇತಿಹಾಸವನ್ನು ಹೇಳುತ್ತಾ ಅಲ್ಲಿಯ ಸಾಮಾಜಿಕ, ಸಾಂಸ್ಕೃತಿಕತೆಯನ್ನು ವಿವರಿಸಿದ್ದಾರೆ.

ಬರ್ಲಿನ್ ಇಡೀ ಜರ್ಮನ್ ದೇಶವನ್ನು ಪ್ರತಿನಿಧಿಸುತ್ತದೆ. ಮಾರ್ಟಿನ್ ಲೂಥರ್, ಬಿಸ್ಮಾರ್ಕ್, ಹಿಟ್ಲರ್‌ರಂತ ತೀವ್ರಗಾಮಿಗಳು; ನೀಷೆ, ಗೋಥೆ, ಹೇಗಲ್‌ರಂತ ದಾರ್ಶನಿಕರು; ಸಿಮೆನ್ಸ್, ರಾಥೆನೌ, ಮುಂತಾದ ಕೈಗಾರಿಕಾ ಉದ್ಯಮಿಗಳು; ಕಾರ್ಲ್‌ಮಾರ್ಕ್ಸ್, ಲೆನಿನ್‌ರಂತ ಕಮ್ಯುನಿಸ್ಟ್ ಕ್ರಾಂತಿಕಾರರು ಕಾಲಕಳೆದ ಸ್ಥಳವಾಗಿ; ಅನೇಕ ಸಾಹಿತಿ, ಚಿತ್ರಗಾರರು, ಶಿಲ್ಪಿಗಳ ಆವಾಸ ಸ್ಥಾನವಾಗಿ ನಾಝಿ ಹಿಟ್ಲರ್‌ನಿಂದ ಕುಪ್ರಸಿದ್ಧವಾಗಿ, ರಕ್ತಕ್ರಾಂತಿ, ಕ್ಷೋಭೆಗಳಿಗೆ ಹೆಸರಾಗಿ ಹೀಗೆ ನಾಗರಿಕತೆ, ಶಾಂತಿಪ್ರಿಯ, ಬೌದ್ಧಿಕ ನಗರವಾಗಿರುವುದು ಇತಿಹಾಸದ ಬೆಳವಣಿಗೆಗೆ ಸಾಕ್ಷಿ. ಬರ್ಲಿನ್ ಎಂದರೆ ಬರ್ಲಿನ್ ಗೋಡೆ ನೆನಪಿಗೆ ಬರುತ್ತದೆ. ಈ ಗೋಡೆ ಒಂದೇ ಜನಾಂಗ, ಒಂದೇ ಭಾಷಿಕರ, ಒಂದೇ ಸಂಸ್ಕೃತಿಯ, ಒಂದೇ ನಡೆ–ನುಡಿಗಳ ಒಂದು ರಾಷ್ಟ್ರದ ರಾಜಧಾನಿಯನ್ನು ವಿಭಜನೆಮಾಡಲು ನಿರ್ಮಿಸಲಾಗಿತ್ತು. ಈ ರೀತಿಯ ವಿಭಜನೆ ವಿಶ್ವದಲ್ಲಿಯೇ ಮೊದಲನೆಯದು ಎನ್ನಬಹುದು. 1961ರಲ್ಲಿ ನಿರ್ಮಾಣವಾದ ವಿಭಜನೆಯ ಗೋಡೆಯು ನವೆಂಬರ್ 10, 1989ರಂದು ಪತನವಾಯಿತು. ಅದರ ಸಮಗ್ರ ಇತಿಹಾಸವನ್ನು ಈ ಕೃತಿಯಲ್ಲಿ ಕಾಣಬಹುದು. ಇದು ಈ ಕೃತಿಯ ಅತ್ಯಂತ ವಿಶೇಷ ಆಸಕ್ತಿದಾಯಕ ವಿಷಯವಾಗಿದೆ.

ಕೃತಿಯ ಮೊದಲ ಭಾಗದಲ್ಲಿ 16 ಅಧ್ಯಾಯಗಳಿದ್ದು, ಸಮಗ್ರ ಇತಿಹಾಸವನ್ನು ವಿವರಿಸುತ್ತವೆ. ಎರಡನೆಯ ಭಾಗದಲ್ಲಿ ಜರ್ಮನಿಯ ಸಾಹಿತ್ಯ, ಸಂಗೀತ, ಚಿತ್ರಕಲೆ, ಶಿಲ್ಪಕಲೆ, ಕಟ್ಟಡ ವಿನ್ಯಾಸ, ನಗರ ಬೆಳವಣಿಗೆಗೆ ಜರ್ಮನ್ ನಗರದ ತತ್ವ, ಶ್ರಮ, ನೈತಿಕತೆ, ಉಡುಪು, ಜೀವನ ಶೈಲಿ, ಧಾರ್ಮಿಕತೆ ಇವುಗಳ ಬಗ್ಗೆ ವಿವರಣೆ ಲಭಿಸುತ್ತದೆ.

ಪುಸ್ತಕಕ್ಕೆ ಕಳಶಪ್ರಾಯವಾದ ಭಾಗ ಉಪಸಂಹಾರ: ಜರ್ಮನಿ ಅತಿರೇಕದ ಪರಮಾವಧಿ ಮುಟ್ಟಿ ಇತರ ದೇಶಗಳಿಗೆ ಬಿಸಿಮುಟ್ಟಿಸಿ, ಹಿಟ್ಲರ್ ಅಧಿಕಾರದ ಅತಿರೇಕದಿಂದ ನಾಶಹೊಂದಿದ. ಅದಕ್ಕೆ 'ಇತಿಮಿತಿ' ಅವಶ್ಯ. ಅದು ಧರ್ಮದ ಪ್ರಮುಖ ಉಪದೇಶ.

ಈ ಇತಿಮಿತಿಯನ್ನು ಪ್ಲೇಟೋ ತನ್ನ ದಿ ರಿಪಬ್ಲಿಕ್ ನಲ್ಲಿ, ಬುದ್ಧ, ಮೊಹಮ್ಮದ್, ಕ್ರಿಸ್ತ ತಮ್ಮ ಉಪದೇಶಗಳಲ್ಲಿ ಸಾರಿದ್ದಾರೆ. ಅತಿರೇಕ ವಿನಾಶಕ್ಕೆ ಎಡೆಮಾಡುತ್ತದೆ. ಮಾನವೀಯ ಹಕ್ಕುಗಳ ಸ್ಥಾಪನೆಯಿಂದ ಅಳವಡಿಕೆಯಿಂದ 'ಇತಿಮಿತಿ' ಸಾಧ್ಯವಾಗುತ್ತದೆ. ಇದರ ಜೊತೆಗೆ ಒಂದು ಜನಾಂಗ ತನ್ನದೇಯಾದ ಸ್ವಾತಂತ್ರ್ಯ, ಪ್ರತ್ಯೇಕ ಅಸ್ತಿತ್ವ, ಸರ್ವರೀತಿಗಳನ್ನು ಇದೇ ಎಂಬ ಭಾವನೆ ಇರಿಸಿಕೊಂಡಾಗ ಮಾತ್ರ ಪೂರ್ಣ ಪ್ರಮಾಣದ 'ರಾಷ್ಟ್ರೀಯತೆ' ಹೊಂದಲು ಸಾಧ್ಯ.

ಏನಿದು ಜರ್ಮೇನಿಯಾ? ಎಂಬ ಪ್ರಶ್ನೆ ಕಾಡುತ್ತದೆ. ಪ್ಯಾರಿಸ್, ಲಂಡನ್, ಪ್ರಾಗ್, ವಿಯನ್ನಾ ನಗರಗಳ ಸೌಂದರ್ಯವನ್ನು, ಅಲ್ಲಿನ ಬಹು ಸೌಧಗಳನ್ನು ಮೀರಿಸುವ ರೀತಿಯಲ್ಲಿ ಬರ್ಲಿನ್ ನಗರವನ್ನು ಪುನರ್‌ನಿರ್ಮಿಸಬೇಕೆಂದು ಆಶಿಸಿ ತನ್ನ ಬಂಟ ವಾಸ್ತುಶಿಲ್ಪಿ ಆಲ್ಬರ್ಟ್ ಸ್ಪಿಯರ್‌ನಿಗೆ ಬರ್ಲಿನ್ ನಗರದ ಹೊರವಲಯದಲ್ಲಿ ಒಂದು ನೂತನ ನಗರ ನಿರ್ಮಾಣಕ್ಕೆ ನಕ್ಷೆ ತಯಾರಿಸಲು ಹಿಟ್ಲರ್ ಆಜ್ಞಾಪಿಸಿದ. ಆ ಹೊಸ ನಗರಕ್ಕೆ 'ಜರ್ಮೇನಿಯಾ' ಎಂದು ಹೆಸರಿಟ್ಟ. ಅದರಂತೆ ನಕ್ಷೆ ಸಿದ್ಧವಾಯಿತು. ಆ ನಗರವನ್ನು ಜರ್ಮನ್ ಚಕ್ರಾಧಿಪತ್ಯದ ರಾಜಧಾನಿಯನ್ನಾಗಿ ಮಾಡುವುದು ಹಿಟ್ಲರ್‌ನ ಆಶಯವಾಗಿತ್ತು. ಆದರೆ ನಿರ್ಮಿಸಲಾಗಿದ್ದ ಜರ್ಮೇನಿಯಾ ಎರಡನೇ ಮಹಾಯುದ್ಧದಲ್ಲಿ ಸರ್ವನಾಶವಾಯಿತು.

ಲೇಖಕರು ಈ ಬೃಹತ್ ಕೃತಿಯ ರಚನೆಗೆ ಕನ್ನಡದ ನಾಲ್ಕು, ಇಂಗ್ಲಿಷ್‌ನ 61 ಕೃತಿಗಳನ್ನು ಪರಾಮರ್ಶಿಸಿದ್ದಾರೆ. 'ಅ'ಕಾರಾದಿ ಸೂಚಿಯನ್ನು ಕೊನೆಯಲ್ಲಿ ಒದಗಿಸಿದ್ದಾರೆ.

ಬೃಹತ್ ಕೃತಿ ಇತಿಹಾಸ ಸಂಶೋಧಕರಿಗೆ, ಇತಿಹಾಸ ಉಪನ್ಯಾಸಕರಿಗೆ, ವಿದ್ಯಾರ್ಥಿಗಳಿಗೆ ಪ್ರವಾಸ ಆಕಾಂಕ್ಷೆಯುಳ್ಳವರಿಗೆ ಅತ್ಯಂತ ಉಪಯುಕ್ತ ಕೃತಿಯಾಗಿದೆ. ಬಿಸ್ಮಾರ್ಕ್ ಮತ್ತು ಹಿಟ್ಲರ್‌ನ ಬಗ್ಗೆ ಹೆಚ್ಚಿನ ವಿಷಯದ ತಿಳುವಳಿಕೆ ಈ ಕೃತಿಯಿಂದ ಲಭಿಸುತ್ತದೆ ಎಂದರೆ ಅತಿಶಯೋಕ್ತಿಯಲ್ಲ ಎನ್ನಬಹುದು.

■

# ವಿಶೇಷ ಸಂಚಿಕೆಗಳ ಮಾರಾಟ

'ಇತಿಹಾಸ ದರ್ಪಣ'ವು ಈವರೆಗೆ ಮೂರು ಸಂಗ್ರಹ ಯೋಗ್ಯವಾದ ವಿಶೇಷ ಸಂಚಿಕೆಗಳನ್ನು ಹೊರತಂದಿದೆ. ಆಯಾ ಕ್ಷೇತ್ರದ ತಜ್ಞರಿಂದಲೇ ಬರೆಸಿ ಹೊರತಂದ ಈ ಕೃತಿಗಳು ನಮ್ಮಲ್ಲಿ ಲಭ್ಯವಿವೆ.

*೧. ಕೃಷ್ಣ(ದೇವ)ರಾಯ ಮತ್ತು ವಿಜಯನಗರ ಸಾಮ್ರಾಜ್ಯ.*

ಒಟ್ಟು ಪುಟಗಳು: ೧೨೦, ಬೆಲೆ: ರೂ. ೯೦/-

ಈ ಕೃತಿಯು ನಾಡಿನ ಮತ್ತು ಹೊರನಾಡಿನ ಹಿರಿಯ ಹಾಗೂ ಯುವ ಸಂಶೋಧಕರುಗಳಾದ ಎಂ.ವಿ.ಶ್ರೀನಿವಾಸ್, ಎಸ್.ಕೆ.ಅರುಣಿ, ಫಾದರ್ ಹೆರಾಸ್, ಶ್ರೀನಿವಾಸ ಶಿಸ್ತಲ, ಕೆ.ಜಿ.ಗೋಪಾಲಕೃಷ್ಣರಾವ್, ಸಿ.ಬಿ.ಪಾಟೀಲ, ಪಿ.ವಿ.ಕೃಷ್ಣಮೂರ್ತಿ, ಎನ್.ವೆಂಕಟರಮಣಯ್ಯ, ಎಚ್.ಎಸ್.ಗೋಪಾಲ್ ರಾವ್, ಮನು ವಿ. ದೇವದೇವನ್, ಹರಿಹರ ಶ್ರೀನಿವಾಸರಾವ್, ಕೆ.ವಸಂತಲಕ್ಷ್ಮಿ, ಕೂ.ಸ.ಅಪರ್ಣ, ಗಿರಿಜಾಪತಿ, ಆರ್.ಶೇಷಶಾಸ್ತ್ರಿ, ಅ.ಲ.ನರಸಿಂಹನ್ ಹಾಗೂ ಸುಂಕಂ ಗೋವರ್ಧನ ಅವರುಗಳ ವಿದ್ವತ್ಪೂರ್ಣ ಲೇಖನಗಳನ್ನು ಒಳಗೊಂಡಿದೆ.

***೨. ನಮ್ಮ ಬೆಂಗಳೂರು.***

ಒಟ್ಟು ಪುಟಗಳು: ೧೧೨, ಬೆಲೆ: ರೂ. ೧೦೦/-

ಈ ಕೃತಿಯು ಎಚ್.ಎಸ್.ದೊರೆಸ್ವಾಮಿ, ಸುಂಕಂ.ಗೋವರ್ಧನ, ಪಿ.ವಿ.ಕೃಷ್ಣಮೂರ್ತಿ, ಎಸ್.ಕೆ.ಅರುಣಿ, ಎಂ.ಜಮುನ, ಸುರೇಶ್ ಮೂನ, ಎಸ್.ಎಲ್.ಶ್ರೀನಿವಾಸಮೂರ್ತಿ, ವೇಮಗಲ್ ಸೋಮಶೇಖರ್, ರಶ್ಮಿ.ಎಸ್, ಆರ್.ಡಿ.ಪವಮಾನ, ಅ.ಲ.ನರಸಿಂಹನ್, ಹಂ.ಗು.ರಾಜೇಶ್, ಎಂ.ಎನ್.ಉಮೇಶ್ ಅವರ ಅಮೂಲ್ಯ ಲೇಖನಗಳ ಜೊತೆಗೆ ಬೆಂಗಳೂರು ಕುರಿತು ಈವರೆಗೂ ಪ್ರಕಟವಾಗಿರುವ ಕೃತಿಗಳ ವಿವರ ಮತ್ತು ಐತಿಹಾಸಿಕ ಚಿತ್ರಗಳ ಸಂಗ್ರಹವನ್ನು ಒಳಗೊಂಡಿದೆ. ಈ ಕೃತಿಯನ್ನು ಎಸ್.ಕೆ.ಅರುಣಿ ಅವರು ಸಂಪಾದಿಸಿದ್ದಾರೆ.

***೩. ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು.***

ಒಟ್ಟು ಪುಟಗಳು: ೧೭೬, ಬೆಲೆ: ರೂ. ೧೧೦/-

ಇದು ಕರ್ನಾಟಕದ ಪುರಾತತ್ವ ಅಧ್ಯಯನಗಳನ್ನು ಕುರಿತು ಸಂಕ್ಷಿಪ್ತ ಚಿತ್ರಣವನ್ನು ಕಟ್ಟಿಕೊಡುವ ಅಪರೂಪದ ಕೃತಿಯಾಗಿದೆ. ಈ ಕೃತಿಗೆ ನಾಡಿನ ಹಿರಿಯ ಮತ್ತು ಯುವ ಪುರಾತತ್ವ ತಜ್ಞರುಗಳಾದ- ಎಂ.ಎಸ್.ಕೃಷ್ಣಮೂರ್ತಿ, ಎಸ್.ನಾಗರಾಜು, ವಿ.ಶೋಭಾ, ಕೆ.ಜಿ.ಶಿವತಾರಕ್, ಎಚ್.ಎಂ.ಅನಿತಾ, ಲ.ನ.ಸ್ವಾಮಿ, ಸಿ.ಎಸ್.ವಾಸುದೇವನ್, ಜಗದೀಶ್ ಅವರುಗಳು ಕೊಡುಗೆ ನೀಡಿದ್ದಾರೆ. ಅಪೂರ್ವ ಛಾಯಾಚಿತ್ರಗಳನ್ನು ಒಂದೆಡೆ ಪ್ರತ್ಯೇಕವಾಗಿಯೇ ನೀಡಲಾಗಿದೆ. ಈ ಕೃತಿಯನ್ನು ಎಸ್.ಕೆ.ಅರುಣಿ ಮತ್ತು ಹಂ.ಗು.ರಾಜೇಶ್ ಸಂಪಾದಿಸಿದ್ದಾರೆ.

ಈ ಮೇಲಿನ ಬಿಡಿ ಕೃತಿಗಳು ಬೇಕಾದಲ್ಲಿ ಈ ಕೆಳಕಂಡ ವಿಳಾಸಕ್ಕೆ ಕೃತಿಯ ಮೊತ್ತದ ಜೊತೆಗೆ ರೂ.೨೦/- ಅಂಚೆವೆಚ್ಚ ಸೇರಿಸಿ, ಎಂ.ಓ /ಡಿ.ಡಿ ಯನ್ನು ತಮ್ಮ ವಿಳಾಸದ ಜೊತೆಗೆ ಕಳುಹಿಸಿಕೊಡಿ.

**ವಿಶೇಷ ಕೊಡುಗೆ: ರೂ.೨೫೦/- ಗಳಿಗೆ ಮೂರೂ ಕೃತಿಗಳನ್ನು ಕಳುಹಿಸಿಕೊಡಲಾಗುವುದು.**

**ವಿಳಾಸ: ಸಂಪಾದಕರು, 'ಇತಿಹಾಸ ದರ್ಪಣ', ＃೩೩ ಎ, ಐ.ಟಿ.ಐ ಕಾಲೇಜು ಹತ್ತಿರ, ಕೆಂಪೇಗೌಡನಗರ, ವಿಶ್ವನೀಡಂ - ಅಂಚೆ, ಬೆಂಗಳೂರು-೫೬೦೦೯೧. ಮೊ- ೦೮೭೯೪೪೦೪೦೭೩**

## ಆಕರ ವಿಭಾಗ

# ಹೊಯ್ಸಳ ದೊರೆ ಮೂರನೇ ನರಸಿಂಹನ ಕಾಲದ ಎರಡು ಅಪ್ರಕಟಿತ ಶಾಸನಗಳು

❑ ಮಂಜುನಾಥ.ಎಂ.ಕೆ.
ಸಂಶೋಧನಾ ವಿದ್ಯಾರ್ಥಿ,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ,
ಮಾನಸಗಂಗೋತ್ರಿ, ಮೈಸೂರು.
ದೂ:9886094006

**1. ನುಣ್ಣೂರು ಗ್ರಾಮದ ಶಾಸನ :**

ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ನುಣ್ಣೂರು ಗ್ರಾಮದ ಹೊರವಲಯದಲ್ಲಿರುವ ಹೊಲ ವೊಂದರಲ್ಲಿ ಶಿಲಾಶಾಸನವೊಂದು ಪತ್ತೆಯಾಗಿದೆ. ಅರ್ಧಕ್ಕಿಂತ ಹೆಚ್ಚು ಭಾಗ ಭೂಮಿಯಲ್ಲಿ ಹೂತುಹೋಗಿದ್ದ ಈ ಶಾಸನವನ್ನು ಅಗೆದು ತೆಗೆದು ಪರಿಶೀಲಿಸಿದಾಗ ಅಪ್ರಕಟಿತ ಶಾಸನವೆಂದು ತಿಳಿದುಬಂದಿದೆ. ಐದು ಅಡಿ ಉದ್ದ, ಎರಡೂವರೆ ಅಡಿ ಅಗಲ ಹಾಗೂ ಅರ್ಧ ಅಡಿ ದಪ್ಪವಾದ ಕಣಶಿಲೆಯ ಫಲಕದ ಮೇಲೆ ಈ ಶಾಸನವನ್ನು ಕಂಡರಿಸಲಾಗಿದೆ. ಈ ಶಾಸನದ ಭಾಷೆ ಹಾಗೂ ಲಿಪಿಯು ಕನ್ನಡವಾಗಿದೆ. ಈ ಲಿಪಿಯು ಹೊಯ್ಸಳರ ಕಾಲದ್ದಾಗಿದ್ದು, ಸುಂದರವಾಗಿದೆ. ಕಣಶಿಲೆಯ ಕಲ್ಲಿನ ಮೇಲೆ ಗುಂಡಾಗಿ, ಆಕರ್ಷಕವಾಗಿ ಶಾಸನವನ್ನು ಕೊರೆದಿರುವುದು ವಿಶೇಷ.

ಶಾಸನ ಪಾಠದ ಮೇಲ್ಭಾಗದಲ್ಲಿ ಸುಮಾರು ಒಂದು ಅಡಿ ಎತ್ತರವಾದ ಉಬ್ಬುಶಿಲ್ಪವನ್ನು ಕಡೆಯಲಾಗಿದೆ. ಶಾಸನ ಫಲಕದ ತೀರಾ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಶಿಲ್ಪಗಳ ಕೆಳಭಾಗದಲ್ಲಿ ಇಬ್ಬರು ವ್ಯಕ್ತಿಗಳು ಪ್ರತ್ಯೇಕವಾದ ಪೀಠಗಳ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದಾರೆ. ಅವರ ಮಧ್ಯದಲ್ಲಿರುವ ಗಂಡಸಿನ ಉಡುಗೆ ಧರಿಸಿರುವ ಗಂಡಭೇರುಂಡದ ತಲೆಯನ್ನುಳ್ಳ ವ್ಯಕ್ತಿಯೊಬ್ಬ, ತನ್ನ ಎರಡೂ ಕೈಗಳನ್ನು ಎರಡೂ ಬದಿಗೆ ಚಾಚಿ ಇಕ್ಕೆಲಗಳಲ್ಲಿ ಕುಳಿತಿರುವ ವ್ಯಕ್ತಿಗಳ ತಲೆಯ ಮೇಲೆ ಇರಿಸಿ ಆಶೀರ್ವದಿಸುತ್ತಿದ್ದಾನೆ. ಬಲಗಡೆ ಕುಳಿತ ವ್ಯಕ್ತಿಯ ಮೇಲೆ ಹುಲಿಯೊಂದು ತನ್ನ ಎಡಮುಂಗಾಲನ್ನು ಮೇಲೆತ್ತಿ ಆಕ್ರಮಣ ಮಾಡುವ ಭಂಗಿಯಲ್ಲಿದೆ. ಹುಲಿಯ ಪಕ್ಕದಲ್ಲಿ ಪೂರ್ಣಕುಂಭ ಹಾಗೂ

